# ವಾಲ್ಮೀಕಿಮಹಾಮುನಿಪ್ರಾರ್ಥನೆ.

---

ಕೂಜಂತಂರಾಮರಾಮೇತಿ ಮಧುರಂಮಧುರಾಕ್ಷರಂ।
ಆರುಹ್ಯಕವಿತಾಶಾಖಾಂ ವಂದೇವಾಲ್ಮೀಕಿಕೋಕಿಲಂ ॥ ೧ ॥

ಟೀ॥ ಕವಿತಾಶಾಖಾಂ, ಕವಿತಾ-ಕವಿತ್ವವೆಂಬ, ಶಾಖಾಂ ರಂಬೆಯನ್ನು, ಆರುಹ್ಯ-ಹತ್ತಿ, ಮಧುರಂ-ಮನೋಹರವಾಗಿಯೂ, ಮಧುರಾಕ್ಷರಂ-ಕಿವಿಗೆಮಧುರವಾದ ಅಕ್ಷರಗಳಿಂದೊಡಗೂಡಿಯೂ, ರಾಮ ರಾಮೇತಿ--ರಾಮ ರಾಮಎಂಬದಾಗಿ, ಕೂಜಂತಂ--ಕೂಗುತಲಿರುವಂಥಾ, ವಾಲ್ಮೀಕಿಕೋಕಿಲಂ--ವಾಲ್ಮೀಕಿಯೆಂಬ ಕೋಗಿಲೆಯನ್ನು, ವಂದೆ--ನಮಸ್ಕರಿಸುತ್ತೇನೆ, ಅಹಂ--ನಾನೆಂದು ಶೇಷವು ॥

ವಾಲ್ಮೀಕೇರ್ಮುನಿಸಿಂಹಸ್ಯ ಕವಿತಾವನಚಾರಿಣಃ ।
ಶೃಣ್ವನ್ ರಾಮಕಥಾನಾದಂ ಕೋನಯಾತಿಪರಾಂಗತಿಂ ॥ ॥೨॥

ಟೀ॥ ಕವಿತಾವನಚಾರಿಣಃ, ಕವಿತಾ-ಕವಿತ್ವವೆಂಬ, ವನಚಾರಿಣಃ- ಅರಣ್ಯದಲ್ಲಿ ಸಂಚರಿಸುವಂಥಾ, ವಾಲ್ಮೀಕೇರ್ಮುನಿಸಿಂಹಸ್ಯ-ವಾಲ್ಮೀಕಿಮುನಿಯೆಂಬ ಸಿಂಹದ, ರಾಮಕಥಾನಾದಂ, ರಾಮಕಥಾ-ರಾಮಾಯಣವೆಂಬ, ನಾದಂ--ಸಿಂಹನಾದವನ್ನು, ಶೃಣ್ವನ್--ಕೇಳುವಂಥಾ, ಕಃ--ಯಾವನು ತಾನೆ, ಪರಾಂ--ಉತ್ತಮವಾದ, ಗತಿಂ-ಗತಿಯನ್ನು, ನಯಾತಿ ಹೊಂದುವದಿಲ್ಲ, (ಎಂದರೆ ಶ್ರೀರಾಮಾಯಣವನ್ನು ಕೇಳುವವರೆಲ್ಲರೂ ಉತ್ತಮಲೋಕವನ್ನೈದುತ್ತಾರೆಂದು ಭಾವವು)॥

ಯಃಪಿಬನ್ ಸತತಂ ರಾಮಚರಿತಾಮೃತಸಾಗರಂ ।
ಅತೃಪ್ತಸ್ತಂ ಮುನಿಂವಂದೆ ಪ್ರಾಚೇತಸಮಕಲ್ಮಷಂ ॥ ॥೩॥

ಟೀ॥ ಯಃ--ಯಾವಮಹಾಮುನಿಯು, ಸತತಂ-ಯಾವಾಗಲೂ, ರಾಮಚರಿತಾಮೃತಸಾಗರಂ--ಶ್ರೀರಾಮದೇವರ ಚರಿತ್ರವೆಂಬ ಅಮೃತಸಮುದ್ರವನ್ನು, ಪಿಬನ್--ಕುಡಿಯುವಂತವನಾದರೂ, ಅತೃಪ್ತಃ--ತೃಪ್ತಿಯಂ ಪಡೆಯದಿರುತ್ತಾನೊ,ತಂ-ಅಂಥಾ,ಪ್ರಾಚೇತಸಂ--ವರುಣನಪುತ್ರನಾಗಿಯೂ, ಅಕಲ್ಮಷಂ--ಕಳಂಕಶೂನ್ಯನಾಗಿಯೂ ಇರುವ, ಮುನಿಂ-ಋಷಿಯನ್ನು, ವಂದೆ-ವಂದಿಸುತ್ತೇನೆ ॥

---

ಆಂಜನೇಯ ಪ್ರಾರ್ಥನೆ.

---

ಗೋಷ್ಪದೀಕೃತವಾರಾಶಿಂ ಮಶಕೀಕೃತರಾಕ್ಷಸಂ ।
ರಾಮಾಯಣಮಹಾಮಾಲಾ ರತ್ನಂ ವಂದೇ ನಿಲಾತ್ಮಜಂ ॥ ॥೧॥

ಟೀ॥ ಗೋಷ್ಪದೀಕೃತವಾರಾಶಿಂ, ಗೋಷ್ಪದೀಕೃತ--ಹಸುವುಕಾಲಿಕ್ಕಿದಸ್ಥಳಕ್ಕೆ ಗೋಷ್ಪದವೆಂದು ಹೆಸರು, ಅದರ ಹಳ್ಳದೋಪಾದಿಸಮುದ್ರವನ್ನೆಣಿಸಿ ದಾಟಿದವನಾಗಿಯೂ,ಮಶಕೀಕೃತರಾಕ್ಷಸಂ,ಮಶಕೀಕೃತ-ಸೊಳ್ಳೆಗಳೋಪಾದಿ ಅಲ್ಪಜೀವಗಳನ್ನಾಗಿ ಮಾಡಲ್ಪಟ್ಟ, ರಾಕ್ಷಸಂ--ರಾಕ್ಷಸರುಳ್ಳವನಾಗಿಯೂ, ರಾಮಾಯಣಮಹಾಮಾಲಾರತ್ನಂ, ರಾಮಾಯಣ-ರಾಮಾಯಣವೆಂಬ, ಮಹಾ-ಮಹತ್ತಾದ, ಮಾಲಾ-ಹಾರಕ್ಕೆ, ರತ್ನಂ-ನಾಯಕರತ್ನವಾಗಿಯೂ ಇರುವ, ಅನಿಲಾತ್ಮಜಂ, ಅನಿಲ-ವಾಯುದೇವರ, ಆತ್ಮಜಂ--ಕುಮಾರನಾದ ಹನುಮಂತನನ್ನು, ವಂದೆ--ನಮಸ್ಕರಿಸುತ್ತೇನೆ ॥

ಅಂಜನಾನಂದನಂವೀರಂ ಜಾನಕೀಶೋಕನಾಶನಂ ।
ಕಪೀಶಮಕ್ಷಹಂತಾರಂ ವಂದೇಲಂಕಾಭಯಂಕರಂ ॥ ॥೨॥

ಟೀ॥ ಅಂಜನಾನಂದನಂ, ಅಂಜನಾ- ಅಂಜನಾದೇವಿಯ, ನಂದನಂ_ಮಗನಾಗಿಯೂ, ವೀರಂ-ಪರಾಕ್ರಮವುಳ್ಳವನಾಗಿ ಯೂ, ಜಾನಕೀಶೋಕನಾಶನಂ,ಜಾನಕೀ-ಸೀತಾದೇವಿಯ, ಶೋಕ-ದುಃಖವನ್ನು, ನಾಶನಂ-ನಾಶಮಾಡುವವನಾಗಿಯೂ, ಕಪೀಶಂ-ವಾನರಶ್ರೇಷ್ಠನಾಗಿಯೂ, ಅಕ್ಷಹಂತಾರಂ-ಅಕ್ಷ ಕುಮಾರನನ್ನು ಕೊಂದವನಾಗಿಯೂ, ಲಂಕಾಭಯಂಕರಂ- ಲಂಕಾಪಟ್ಟಣಕ್ಕೆ ಭಯವನ್ನುಂಟುಮಾಡುವವನಾಗಿಯೂ ಇರುವ ಹನುಮಂತನನ್ನು, ವಂದೆ-ನಮಸ್ಕರಿಸುತ್ತೇನೆ ॥

ಆಂಜನೇಯಮತಿಪಾಟಲಾನನಂ ಕಾಂಚನಾದ್ರಿಕಮನೀಯವಿಗ್ರಹಂ।
ಪಾರಿಜಾತತರುಮೂಲವಾಸಿನಂಭಾವಯಾಮಿಪವಮಾನನಂದನಂ॥೩

ಟೀ॥ ಆಂಜನೇಯಂ-ಅಂಜನಾದೇವಿಯ ಕುಮಾರನಾಗಿ ಯೂ, ಅತಿಪಾಟಲಾಲನಂ-ಬಹಳಕೆಂಪಾದ ಮುಖವುಳ್ಳವ ನಾಗಿಯೂ, ಕಾಂಚನಾದ್ರಿಕಮನೀಯವಿಗ್ರಹಂ, ಕಾಂಚ ನಾದ್ರಿ-ಸುವರ್ಣಪರ್ವತದೋಪಾದಿ, ಕಮನೀಯ-ಮನೋ ಹರವಾದ, ವಿಗ್ರಹಂ-ಶರೀರವುಳ್ಳಂಥಾ, ಪಾರಿಜಾತತರುಮೂ ಲವಾಸಿನಂ, ಪಾರಿಜಾತ-ಪಾರಿಜಾತವೆಂಬ, ತರು-ವೃಕ್ಷದ, ಮೂಲವಾಸಿನಂ, ಬುಡದಲ್ಲಿ ಕುಳಿತಿರುವಂತಾ, ಪವಮಾನ ನಂದನಂ-ವಾಯುಕುಮಾರನಾದ ಹನುಮಂತನನ್ನು, ಭಾವ ಯಾಮಿ-ಧ್ಯಾನಿಸುತ್ತೇನೆ ॥

ಜಿತಂಭಗವತಾತೇನ ಹರಿಣಾಲೋಕಧಾರಿಣಾ ।
ಅಜೇನವಿಶ್ವರೂಪೇಣ ನಿರ್ಗುಣೇನಗುಣಾತ್ಮನಾ ॥ ॥೪॥

ಟೀ॥ ಲೋಕಧಾರಿಣಾ-ಸಕಲಲೋಕಾಧಾರ ಭೂತನಾ ಗಿಯೂ, ಅಜೇನ-ಜನನಮೊದಲಾದ ವಿಕಾರಗಳಿಲ್ಲದೆ ನಿತ್ಯ

ನಾಗಿಯೂ, ವಿಶ್ವರೂಪೇಣ-ಸಕಲ ಜಗತ್ಸ್ವರೂಪನಾಗಿಯೂ, ನಿರ್ಗುಣೇನ-ಪ್ರಾಕೃತಹೇಯ ಗುಣ ಶೂನ್ಯನಾಗಿಯೂ, ಗುಣಾತ್ಮನಾ-ದಿವ್ಯಕಲ್ಯಾಣಮಂಡಿತಾತ್ಮನಾಗಿಯೂ, ತೇನ-ಸಕಲವೇದಾಂತ ವೇದ್ಯನಾಗಿಯೂ, ಭಗವತಾ-ಷಾಡ್ಗುಣ್ಯ ಪರಿಪೂರ್ಣನಾಗಿಯೂ ಇರುವ, ಹರಿಣಾ-ಶ್ರೀಮನ್ನಾರಾಯಣನಿಂದ, ಜಿತಂ-ಸರ್ವೋತ್ಕರ್ಷದಿಂ ವರ್ತಿಸುವಣವಾಗುತ್ತದೆ॥



# ಬಾಲರಾಮಾಯಣ ಪ್ರಾರಂಭವು.

---

ತಪಸ್ಸ್ವಾಧ್ಯಾಯನಿರತಂ ತಪಸ್ವೀವಾಗ್ವಿದಾಂವರಂ ।
ನಾರದಂ ಪರಿಪಪ್ರಚ್ಛ ವಾಲ್ಮೀಕಿರ್ಮುನಿಪುಂಗವಂ ॥ ॥೧॥

ಟೀ॥ ತಪಸ್ವೀ-ತಪೋನಿಷ್ಠನಾದ, ವಾಲ್ಮೀಕಿಃ-ವಾಲ್ಮೀಕಿಮುನಿಯು, ತಪಸ್ಸ್ವಾಧ್ಯಾಯನಿರತಂ-ತಪಸ್ಸು, ವೇದಾಧ್ಯಯನವು, ಇವುಗಳಲ್ಲಿ ನಿರತನಾಗಿಯೂ, ವಾಗ್ವಿದಾಂ-ಶಬ್ದಬ್ರಹ್ಮವನ್ನು ತಿಳಿದವರಿಗೆ, ವರಂ ಶ್ರೇಷ್ಠನಾಗಿಯೂ, ಮುನಿಪುಂಗವಂ-ಋಷಿಗಳಿಗೆಶ್ರೇಷ್ಠನಾಗಿಯೂ ಇರುವ, ನಾರದಂ-ನಾರದ ಮುನಿಯನ್ನು, ಪರಿಪಪ್ರಚ್ಛ-ಚನ್ನಾಗಿ ಪ್ರಶ್ನೆಮಾಡಿದನು ॥

ಕೋನ್ವಸ್ಮಿನ್ಸಾಂಪ್ರತಂಲೋಕೇ ಗುಣವಾನ್ ಕಶ್ಚ ವೀರ್ಯವಾನ್ ।
ಧರ್ಮಜ್ಞಶ್ಚ ಕೃತಜ್ಞಶ್ಚ ಸತ್ಯವಾಕ್ಯೋದೃಢವ್ರತಃ ॥ ॥೨॥

ಟೀ॥ ಅಸ್ಮಿನ್ಲೋಕೇ-ಈಲೋಕದಲ್ಲಿ, ಸಾಂಪ್ರತಂ-ಈಕಾಲದಲ್ಲಿ, ಕಃ-ಯಾವನು, ಗುಣವಾನ್-ಗುಣವಂತನು, ಕಃ-ಯಾವನು, ವೀರ್ಯವಾನ್-ವೀರ್ಯವಂತನು, ಮತ್ತು ಧರ್ಮಜ್ಞಃ-ಧರ್ಮವಂ ತಿಳಿದವನು, ಕೃತಜ್ಞಃ-ಕೃತಜ್ಞನು, ಸತ್ಯವಾಕ್ಯಃ-ಸತ್ಯವಂ ನುಡಿಯುವವನು, ದೃಢವ್ರತಃ-ದೃಢವಾದ ಧರ್ಮಪರಿಪಾಲನವ್ರತವುಳ್ಳವನು ॥

ಚಾರಿತ್ರೇಣಚ ಕೋಯುಕ್ತಃ ಸರ್ವಭೂತೇಷು ಕೋ॰ ॥
ವಿದ್ವಾನ್ಕಃ ಕಸ್ಸಮರ್ಥಶ್ಚ ಕಶ್ಚೈಕ ಪ್ರಿಯದರ್ಶನಃ ॥ ॥೩॥

ಟೀ॥ ಕಃ-ಯಾವನು, ಚಾರಿತ್ರೇಣ-ಯೋಗ್ಯವಾದ ನಡತೆ

ಯೊಂದಿಗೆ, ಯುಕ್ತಃ-ಕೂಡಿದವನು, ಕಃ-ಯಾವನು, ಸರ್ವ ಭೂತೇಷು-ಸಮಸ್ತ ಪ್ರಾಣಿಗಳಲ್ಲಿಯು, ಹಿತಃ-ಇಷ್ಟನು, ಕಃ-ಯಾವನು, ವಿದ್ವಾನ್-ಪಂಡಿತನು, ಕಃ-ಯಾವನು, ಸಮ ರ್ಥಃ-ಚತುರನು, ಮತ್ತು ಕಃ-ಯಾವನು, ಏಕಪ್ರಿಯದರ್ಶ ನಃ-ಒಂದೇ ಪ್ರಕಾರವಾಗಿ ನೋಡುವಾಗಲೆಲ್ಲಾ ಪ್ರೀತಿಯ ನ್ನುಂಟುಮಾಡುವನು ॥

ಆತ್ಮವಾನ್ಕೋಜಿತಃ ಕ್ರೋಧೋ ದ್ಯುತಿಮಾನ್ಕೋನ ಸೂಯಕಃ।
ಕಸ್ಯಬಿಭ್ಯತಿದೇವಾಶ್ಚ ಜಾತರೋಷಸ್ಯಸಂಯುಗೆ ॥ ॥೪॥

ಟೀ॥ ಕಃ-ಯಾವನು, ಆತ್ಮವಾನ್-ಮನೋನಿಶ್ಚಯವುಳ್ಳ ವನು, ಕಃ-ಯಾವನು, ಜಿತಕ್ರೋಧಃ-ಕೋಪಕ್ಕೆ ಒಳಗಾ ಗದವನು, ಕಃ-ಯಾವನು, ದ್ಯುತಿಮಾನ್-ಶರೀರಕಾಂತಿ ಯುಳ್ಳವನು, ಕಃ-ಯಾವನು, ಅನಸೂಯಕಃ-ಅಸೂಯೆಯಿ ಲ್ಲದವನು, ಸಂಯುಗೆ-ಯುದ್ಧದಲ್ಲಿ, ಜಾತರೋಷಸ್ಯ, ಜಾತ-ಹುಟ್ಟಿದಂಥಾ, ರೋಷಸ್ಯ-ಕೋಪವುಳ್ಳ, ಕಸ್ಯ-ಯಾವನನ್ನು ಕುರಿತು,ದೇವಾಶ್ಚ-ದೇವತೆಗಳು ಸಹ,ಬಿಭ್ಯತಿ-ಹೆದರುವರು॥

ಏತದಿಚ್ಛಾಮ್ಯಹಂಶ್ರೋತುಂ ಪರಂಕೌತೂಹಲಂಹಿಮೆ ।
ಮಹರ್ಷೇತ್ವಂಸಮರ್ಥೋಸಿ ಜ್ಞಾತುಮೆವಂವಿಧಂನರಂ ॥೫॥

ಟೀ॥ ಹೇಮಹರ್ಷೇ-ಎಲೈ ಮಹಾಮುನಿಯೆ, ಏವಂವಿಧಂ-ಇಂಥಾಗುಣಗಳುಳ್ಳ, ನರಂ-ಮನುಷ್ಯನನ್ನು, ಜ್ಞಾತುಂ-ತಿಳಿ ಯುವದಕ್ಕೆ, ತ್ವಂ-ನೀನು, ಸಮರ್ಥಃ-ಸಮರ್ಥನಾಗಿ, ಅಸಿ-ಇದ್ದೀಯೆ, ಆದುದರಿಂದ,ಅಹಂ-ನಾನು, ಏತತ್-ಈ ವೃತ್ತಾಂ ತವನ್ನು, ಶ್ರೋತುಂ-ಕೇಳುವದಕ್ಕೆ, ಇಚ್ಛಾಮಿ-ಇಚ್ಛಿಸು ತ್ತೇನೆ, ಮೇ-ನನಗೆ, ಕೌತೂಹಲಂ-ಅಪೇಕ್ಷೆಯು, ಪರಂಹಿ-

ಅಧಿಕವಾಗಿ ಇದೆಯಲ್ಲ ॥

ಶ್ರುತ್ವಾ ಚೈತತ್ತ್ರಿಲೋಕಜ್ಞೋ ವಾಲ್ಮೀಕೇರ್ನಾರದೋ ವಚಃ ।
ಶ್ರೂಯತಾಮಿತಿ ಚಾಮಂತ್ರ್ಯ ಪ್ರಹೃಷ್ಟೋ ವಾಕ್ಯಮಬ್ರವೀತ್ ॥೬॥

ಟೀ॥ ತ್ರಿಲೋಕಜ್ಞಃ-ಮೂರುಲೋಕಗಳ ವೃತ್ತಾಂತಗಳಂತಿಳಿದ, ನಾರದಃ-ನಾರದನು, ಪ್ರಹೃಷ್ಟಃ-ಸಂತುಷ್ಟನಾಗಿ, ವಾಲ್ಮೀಕೇಃ-ವಾಲ್ಮೀಕಿಯ, ಏತತ್-ಇಂಥಾ, ವಚಃ-ಮಾತನ್ನು, ಶ್ರುತ್ವಾ-ಕೇಳಿ, ಶ್ರೂಯತಾಂ-ಕೇಳಿರಿ, ಇತಿ-ಎಂಬದಾಗಿ, ಆಮಂತ್ರ್ಯ-ಎಚ್ಚರಿಸಿ, ವಾಕ್ಯಂ-ವಚನವನ್ನು ಅಬ್ರವೀತ್-ನುಡಿದನು ॥

ಬಹವೋ ದುರ್ಲಭಾಶ್ಚೈವ ಯೇ ತ್ವಯಾ ಕೀರ್ತಿತಾ ಗುಣಾಃ ।
ಮುನೇ ವಕ್ಷ್ಯಾಮ್ಯಹಂ ಬುಧ್ವಾ ತೈರ್ಯುಕ್ತಃ ಶ್ರೂಯತಾಂ ನರಃ ॥೭॥

ಟೀ॥ ಹೇ ಮುನೇ, ಎಲೈ ವಾಲ್ಮೀಕಿಯೆ, ತ್ವಯಾ-ನಿನ್ನಿಂದ, ಏ-ಯಾವ, ಗುಣಾಃ-ಗುಣಗಳು, ಕೀರ್ತಿತಾಃ-ಹೇಳಲ್ಪಟ್ಟವೊ ಅಂಥಾ, ಬಹವಃ-ಬಹುಗುಣಗಳು, ದುರ್ಲಭಾಃ ಏವ-ಒಬ್ಬನಲ್ಲೇ ದೊರಕಲಾರವು, ಆದರೂ, ಅಹಂ-ನಾನು, ಬುಧ್ವಾ-ಯೋಚನೆಯಿಂದ ತಿಳಿದು, ವಕ್ಷ್ಯಾಮಿ-ಹೇಳುತ್ತೇನೆ, ತೈಃ-ಅಂಥಾ ಸದ್ಗುಣಗಳೊಂದಿಗೆ, ಯುಕ್ತಃ-ಕೂಡಿದಂತಾ, ನರಃ-ಮನುಷ್ಯನು, ಶ್ರೂಯತಾಂ-ನಿನ್ನಿಂದಕೇಳಲ್ಪಡಲಿ.

ಇಕ್ಷ್ವಾಕುವಂಶಪ್ರಭವೋ ರಾಮೋ ನಾಮ ಜನೈಃ ಶ್ರುತಃ ।
ನಿಯತಾತ್ಮಾ ಮಹಾವೀರ್ಯೋ ದ್ಯುತಿಮಾನ್ ಧೃತಿಮಾನ್ ವಶೀ ॥೮॥

ಟೀ॥ ಇಕ್ಷ್ವಾಕುವಂಶಪ್ರಭವಃ, ಇಕ್ಷ್ವಾಕುವಂಶ-ಇಕ್ಷ್ವಾಕುಮಹಾರಾಯನವಂಶದಲ್ಲಿ, ಪ್ರಭವಃ-ಹುಟ್ಟಿದಂಥಾ, ಜನೈಃ-ಸಕಲಜನಗಳಿಂದಲೂ, ಶ್ರುತಃ - ತಿಳಿಯಲ್ಪಟ್ಟಿರುವಂಥಾ,

ರಾಮಃ-ರಾಮನೆಂಬ, ನಾಮ-ಪೆಸರುಳ್ಳಂಥಾ, ನಿಯತಾತ್ಮಾ-ಸ್ಥಿರವಾದ ಚಿತ್ತವುಳ್ಳಂಥಾ, ಮಹಾವೀರ್ಯಃ,ಮಹಾ-ಅಧಿಕವಾದ, ವೀರ್ಯಃ-ಬಲವುಳ್ಳಂಥಾ, ದ್ಯುತಿಮಾನ್-ಕಾಂತಿಯುಳ್ಳಂಥಾ, ಧೃತಿಮಾನ್-ಧೈರ್ಯವುಳ್ಳಂಥಾ, ವಶೀ-ಇಂದ್ರಿಯನಿಗ್ರಹವುಳ್ಳಂಥಾ ॥

ಬುದ್ಧಿಮಾನ್ನೀತಿಮಾನ್ವಾಗ್ಮೀಶ್ರೀಮಾನ್ಶತ್ರುನಿಬರ್ಹಣಃ ।
ವಿಪುಲಾಂಸೋಮಹಾಬಾಹುಃ ಕಂಬುಗ್ರೀವೋಮಹಾಹನುಃ ॥೯॥

ಟೀ॥ ಬುದ್ಧಿಮಾನ್ - ಬುದ್ಧಿಯುಳ್ಳವನಾಗಿಯೂ, ನೀತಿಮಾನ್-ನೀತಿವಂತನಾಗಿಯೂ, ವಾಗ್ಮೀ-ಮಾತಿನ ಚಾತುರ್ಯವುಳ್ಳವನಾಗಿಯೂ, ಶ್ರೀಮಾನ್-ಲಕ್ಷ್ಮೀಕಟಾಕ್ಷವುಳ್ಳವನಾಗಿಯೂ, ಶತ್ರುನಿಬರ್ಹಣಃ, ಶತ್ರು-ಶತ್ರುಗಳಿಗೆ, ನಿಬರ್ಹಣಃ-ನಾಶಕನಾಗಿಯೂ, ವಿಪುಲಾಂಸಃ, ವಿಪುಲ-ವಿಸ್ತಾರವಾದ, ಅಂಸಃ-ಹೆಗಲುಗಳುಳ್ಳವನಾಗಿಯೂ,ಮಹಾಬಾಹುಃ-ದಪ್ಪವಾಗಿಯೂ ದೀರ್ಘವಾಗಿಯೂ ಇರುವಭುಜಗಳುಳ್ಳಂಥಾ, ಕಂಬುಗ್ರೀವಃ,ಕಂಬು-ಶಂಖದೋಪಾದಿ, ಗ್ರೀವಃ-ಕತ್ತುಳ್ಳಂಥಾವನಾಗಿಯೂ, ಮಹಾಹನುಃ-ದೊಡ್ಡದಾದ ಗಂಡಸ್ಥಲವುಳ್ಳವನಾಗಿಯೂ ॥

ಮಹೋರಸ್ಕೋಮಹೇಷ್ವಾಸೋಗೂಢಜತ್ರುರರಿಂದಮಃ ।
ಆಜಾನುಬಾಹುಸ್ಸುಶಿರಾಸ್ಸುಲಲಾಟಸ್ಸುವಿಕ್ರಮಃ ॥೧೦॥

ಟೀ॥ ಮಹೋರಸ್ಕಃ -ವಿಶಾಲವಾದ ಯೆದೆಯುಳ್ಳವನಾಗಿಯೂ, ಮಹೇಷ್ವಾಸಃ-ಮಹತ್ತಾದಧನುಸ್ಸುಳ್ಳವನಾಗಿಯೂ, ಗೂಢಜತ್ರುಃ-ಮಾಂಸದಕಂಡದಿಂದ ಮುಚ್ಚಲ್ಪಟ್ಟ ಭುಜಗಳಮೇಲಿನ ಅಡ್ಡಮೂಳೆಯುಳ್ಳವನಾಗಿಯೂ, ಅರಿಂದಮಃ-

ಕಾಮಕ್ರೋಧಾದಿ ಅರಿಷಡ್ವರ್ಗವನ್ನು ನಿಗ್ರಹಿಸಿದವನಾಗಿಯೂ, ಆಜಾನುಬಾಹುಃ-ಮೊಳಕಾಲುವರಿಗೂ ಉದ್ದವಾದ ಕೈಗಳುಳ್ಳವನಾಗಿಯೂ, ಸುಶಿರಾಃ-ಸುಂದರವಾದ ಶಿರಸ್ಸುಳ್ಳವನಾಗಿಯೂ, ಸುಲಲಾಟಃ-ಸುಂದರವಾದ ಹಣೆಯುಳ್ಳವನಾಗಿಯೂ, ಸುವಿಕ್ರಮಃ-ಶ್ಲಾಘ್ಯವಾದ ಪರಾಕ್ರಮವುಳ್ಳಂಥಾವನಾಗಿಯೂ ||

ಸಮಸ್ಸಮವಿಭಕ್ತಾಂಗ ಸ್ನಿಗ್ಧವರ್ಣಃಪ್ರತಾಪವಾನ್ |
ಪೀನವಕ್ಷಾವಿಶಾಲಾಕ್ಷೋ ಲಕ್ಷ್ಮೀವಾನ್ಶುಭಲಕ್ಷಣಃ || ||೧೧||

ಟೀ|| ಸಮಃ-ಸಾಮುದ್ರಿಕಶಾಸ್ತ್ರಪ್ರಕಾರವಾಗಿ ೯೬ ಅಂಗುಲ ಪ್ರಮಾಣವಾದ ದೇಹವುಳ್ಳವನಾಗಿಯೂ, ಸಮವಿಭಕ್ತಾಂಗಃ -ಆ ಶಾಸ್ತ್ರದಿಂದ ಹೇಳಲ್ಪಟ್ಟಮೇರೆ ಆಯಾ ಅವಯವ ಪ್ರಮಾಣವುಳ್ಳವನಾಗಿಯೂ, ಸ್ನಿಗ್ಧವರ್ಣಃ-ಮಿಂಚುಳ್ಳದೇಹದ ಬಣ್ಣವುಳ್ಳವನಾಗಿಯೂ, ಪ್ರತಾಪವಾನ್-ಪ್ರತಾಪವುಳ್ಳವನಾಗಿಯೂ, ಪೀನವಕ್ಷಾಃ-ದಪ್ಪವಾದ ಎದೆಯುಳ್ಳವನಾಗಿಯೂ, ವಿಶಾಲಾಕ್ಷಃ-ಅಗಲವಾದ ಕಣ್ಗಳುಳ್ಳವನಾಗಿಯೂ, ಲಕ್ಷ್ಮೀವಾನ್-ಸರ್ವಾವಯವಸೌಂದರ್ಯವುಳ್ಳವನಾಗಿಯೂ, ಶುಭಲಕ್ಷಣಃ-ಶುಭಕರಗಳಾದ ಸರ್ವಲಕ್ಷಣಗಳುಳ್ಳವನಾಗಿಯೂ ||

ಧರ್ಮಜ್ಞಸ್ಸತ್ಯಸಂಧಶ್ಚ ಪ್ರಜಾನಾಂಚಹಿತೇರತಃ |
ಯಶಸ್ವೀ ಜ್ಞಾನಸಂಪನ್ನ ಶ್ಶುಚಿರ್ವಶ್ಯಸ್ಸಮಾಧಿಮಾನ್|| ||೧೨||

ಟೀ|| ಧರ್ಮಜ್ಞಃ-ಧರ್ಮಗಳನ್ನು ತಿಳಿದವನಾಗಿಯೂ, ಸತ್ಯಸಂಧಃ-ಮಾಡಿದಪ್ರತಿಜ್ಞೆಯನ್ನು ತಪ್ಪದವನಾಗಿಯೂ, ಪ್ರಜಾನಾಂ-ಪ್ರಜೆಗಳ, ಹಿತೇ-ಹಿತದಲ್ಲಿ, ರತಃ-ಆಸಕ್ತನಾಗಿ

ಯೂ, ಯಶಸ್ವೀ-ಕೀರ್ತಿವುಂತನಾಗಿಯೂ, ಜ್ಞಾನಸಂಪನ್ನಃ-ಜ್ಞಾನವುಳ್ಳವನಾಗಿಯೂ, ಶುಚಿಃ-ಪರಿಶುದ್ಧನಾಗಿಯೂ, ವಶ್ಯಃ-ದೊಡ್ಡವರಿಗೆ ವಿಧೇಯನಾಗಿಯೂ, ಸಮಾಧಿಮಾ೯-ಮನೋನಿಯಮವುಳ್ಳವನಾಗಿಯೂ ॥

ಪ್ರಜಾಪತಿಸಮಶ್ಶ್ರೀಮಾ೯ ಧಾತಾರಿಪುನಿಷೂದನಃ ।
ರಕ್ಷಿತಾಜೀವಲೋಕಸ್ಯ ಧರ್ಮಸ್ಯಪರಿರಕ್ಷಿತಾ ॥ ॥೧೩॥

ಟೀ॥ ಪ್ರಜಾಪತಿಸಮಃ-ಬ್ರಹ್ಮದೇವನಿಗೆ ಸಮನಾಗಿಯೂ ಶ್ರೀಮಾ೯-ಐಶ್ವರ್ಯವುಳ್ಳವನಾಗಿಯೂ, ಧಾತಾ-ಸಕಲಜಗತ್ತನ್ನು ಧರಿಸುವವನಾಗಿಯೂ, ರಿಪುನಿಷೂದನಃ, ರಿಪು-ಶತ್ರುಗಳಿಗೆ, ನಿಷೂದನಃ-ನಾಶಕನಾಗಿಯೂ, ಜೀವಲೋಕಸ್ಯ-ಪ್ರಾಣಿಲೋಕಕ್ಕೆ, ರಕ್ಷಿತಾ-ರಕ್ಷಿಸುವವನಾಗಿಯೂ, ಧರ್ಮಸ್ಯ-ಧರ್ಮಕ್ಕೆ, ಪರಿರಕ್ಷಿತಾ-ಚನ್ನಾಗಿ ರಕ್ಷಿಸುವವನಾಗಿಯೂ, ॥

ರಕ್ಷಿತಾಸ್ವಸ್ಯಧರ್ಮಸ್ಯ ಸ್ವಜನಸ್ಯಚರಕ್ಷಿತಾ ।
ವೇದವೇದಾಂಗತತ್ವಜ್ಞೋ ಧನುರ್ವೇದೇಚನಿಷ್ಠಿತಃ ॥ ॥೧೪॥

ಟೀ॥ ಸ್ವಸ್ಯ-ತನ್ನದಾಗಿಯಿರುವ, ಧರ್ಮಸ್ಯ-ರಾಜಧರ್ಮವನ್ನು, ರಕ್ಷಿತಾ-ರಕ್ಷಿಸುವಂಥಾವನಾಗಿಯೂ, ಸ್ವಜನಸ್ಯ-ತನ್ನನ್ನಾಶ್ರಯಿಸಿದಜನವನ್ನು, ರಕ್ಷಿತಾ - ರಕ್ಷಿಸುವಂಥಾವನಾಗಿಯೂ, ವೇದವೇದಾಂಗತತ್ವಜ್ಞಃ, ವೇದ-ನಾಲ್ಕುವೇದಗಳು, ವೇದಾಂಗ-ಷಡಂಗಗಳು ಇವುಗಳ, ತತ್ವಜ್ಞಃ-ತತ್ವವಂತಿಳಿದವನಾಗಿಯೂ, ಧನುರ್ವೇದೇಚ-ಧನುರ್ವೇದದಲ್ಲೂ, ನಿಷ್ಠಿತಃ-ಸಿರತನಾಗಿಯೂ

ಸರ್ವಶಾಸ್ತ್ರಾರ್ಥತತ್ವಜ್ಞಸ್ಸ್ಮೃತಿಮಾ೯ ಪ್ರತಿಭಾನವಾ೯ ।
ಸರ್ವಲೋಕಪ್ರಿಯಸ್ಸಾಧು ರದೀನಾತ್ಮಾವಿಚಕ್ಷಣಃ ॥ ॥೧೫॥

ಟೀ|| ಸರ್ವಶಾಸ್ತ್ರಾರ್ಥತತ್ತ್ವಜ್ಞಃ, ಸರ್ವ-ಸಮಗ್ರಗಳಾದ, ಶಾಸ್ತ್ರಾರ್ಥ, ಶಾಸ್ತ್ರ-ಶಾಸ್ತ್ರಗಳ, ಅರ್ಥ-ಅರ್ಥಗಳ, ತತ್ವ-ಸಾರಾಂಶಗಳನ್ನು, ಜ್ಞಃ-ತಿಳಿದವನಾಗಿಯೂ, ಸ್ಮೃತಿಮಾನ್-ಚನ್ನಾಗಿ ಜ್ಞಾಪ್ತಿಯುಳ್ಳವನಾಗಿಯೂ, ಪ್ರತಿಭಾನವಾನ್- ಸಮಯೋಚಿತ ಯುಕ್ತಿಯುಳ್ಳವನಾಗಿಯೂ, ಸರ್ವಲೋಕಪ್ರಿಯಃ- ಸರ್ವಲೋಕಗಳಿಗೂ ಇಷ್ಟನಾಗಿಯೂ, ಸಾಧುಃ-ಯೋಗ್ಯವಾದ ಸ್ವಭಾವವುಳ್ಳವನಾಗಿಯೂ, ಅದೀನಾತ್ಮಾ-ದೀನತ್ವವಿಲ್ಲದ ಆತ್ಮವುಳ್ಳವನಾಗಿಯೂ ವಿಚಕ್ಷಣಃ- ಸರ್ವಕಾರ್ಯಗಳಲ್ಲಿಯೂ, ಚಾತುರ್ಯವುಳ್ಳವನಾಗಿಯೂ ||

ಸರ್ವದಾಭಿಗತಸ್ಸದ್ಭಿಸ್ಸಮುದ್ರಇವಸಿಂಧುಭಿಃ |
ಆರ್ಯಸ್ಸರ್ವಸಮಶ್ಚೈವ ಸದೈವಪ್ರಿಯದರ್ಶನಃ || ||೧೬||

ಟೀ|| ಸಿಂಧುಭಿಃ-ನದನದಿಗಳಿಂದ, ಸಮುದ್ರಃಇವ-ಸಮುದ್ರದೋಪಾದಿ, ಸದ್ಭಿಃ-ಸತ್ಪುರುಷರಿಂದ, ಸರ್ವದಾ-ಯಾವಾಗ್ಯೂ, ಅಭಿಗತಃ-ಅನುಸರಿಸಲ್ಪಟ್ಟವನಾಗಿಯೂ, ಆರ್ಯಃ-ಪೂಜ್ಯನಾಗಿಯೂ, ಸರ್ವಸಮಃ-ಶತ್ರುಗಳಲ್ಲಿಯೂ ಮಿತ್ರರಲ್ಲಿಯೂ ಸಮಬುದ್ಧಿಯುಳ್ಳವನಾಗಿಯೂ, ಸದಾಏವ-ಸರ್ವಕಾಲದಲ್ಲೂ, ಪ್ರಿಯದರ್ಶನಃ-ಸರ್ವರಿಗೂ ಪ್ರಿಯವಾದ ದರ್ಶನವುಳ್ಳವನಾಗಿಯೂ ||

ಸಚ ಸರ್ವಗುಣೋಪೇತಃ ಕೌಸಲ್ಯಾನಂದವರ್ಧನಃ |
ಸಮುದ್ರಇವ ಗಾಂಭೀರ್ಯೇ ಧೈರ್ಯೇಣ ಹಿಮವಾನಿವ|| ||೧೭||

ಟೀ|| ಸಃ-ಚ-ಅಂಥಾಪ್ರಸಿದ್ಧನಾದ ಮಹಾತ್ಮನು, ಸರ್ವಗುಣೋಪೇತಃ, ಸರ್ವ-ಸಮಸ್ತವಾದ, ಗುಣ-ಸದ್ಗುಣಗಳೊಂದಿಗೆ, ಉಪೇತಃ - ಕೂಡಿದವನಾಗಿಯೂ, ಕೌಸಲ್ಯಾನಂದವ

ರ್ಧನಃ, ಕೌಸಲ್ಯಾ-ಕೌಸಲ್ಯಾದೇವಿಗೆ, ಆನಂದವರ್ಧನಃ-ಸಂತೋಷವಂ ವೃದ್ಧಿಗೊಳಿಸುವಂಥಾ ಮಗನಾಗಿಯೂ, ಗಾಂಭೀರ್ಯೇ-ಗಂಭೀರತ್ವದಲ್ಲಿ, ಸಮುದ್ರಃಇವಸ್ಥಿತಃ-ಸಮುದ್ರದೋಪಾದಿ ಇರುವಂಥಾವನಾಗಿಯೂ, ಧೈರ್ಯೇಣ-ಧೈರ್ಯದಿಂದ, ಹಿಮವಾನ್ ಇವಸ್ಥಿತಃ-ಹಿಮವತ್ಪರ್ವತದೋಪಾದಿ ಇರುವಂಥಾವನಾಗಿಯೂ ||

ವಿಷ್ಣುನಾ ಸದೃಶೋವೀರ್ಯೇ ಸೋಮವತ್ಪ್ರಿಯದರ್ಶನಃ |
ಕಾಲಾಗ್ನಿಸದೃಶಃ ಕ್ರೋಧೇ ಕ್ಷಮಯಾ ಪೃಥಿವೀಸಮಃ || ||೧೮||

ಟೀ|| ವೀರ್ಯೇ-ಪರಾಕ್ರಮದಲ್ಲಿ, ವಿಷ್ಣುನಾ-ವಿಷ್ಣುವೊಂದಿಗೆ, ಸದೃಶಃ-ಸಮಾನನಾಗಿಯೂ, ಸೋಮವತ್-ಚಂದ್ರನೋಪಾದಿ, ಪ್ರಿಯದರ್ಶನಃ-ಆಹ್ಲಾದಕರವಾದ ನೋಟವುಳ್ಳವನಾಗಿಯೂ, ಕ್ರೋಧೇ-ಕೋಪದಲ್ಲಿ, ಕಾಲಾಗ್ನಿಸದೃಶಃ-ಪ್ರಳಯಕಾಲದ ಅಗ್ನಿಯೊಂದಿಗೆ ಸಮನಾಗಿಯೂ, ಕ್ಷಮಯಾ-ಸಹನೆಯಿಂದ, ಪೃಥಿವೀಸಮಃ, ಪೃಥಿವೀ-ಭೂದೇವತೆಯೊಂದಿಗೆ, ಸಮಃ-ಸಮಾನನಾಗಿಯೂ ||

ಧನದೇನಸಮಸ್ತ್ಯಾಗೇ ಸತ್ಯೇಧರ್ಮಇವಾಪರಃ |
ತಮೇವಂ ಗುಣಸಂಪನ್ನಂ ರಾಮಂ ಸತ್ಯಪರಾಕ್ರಮಂ || ||೧೯||

ಟೀ|| ತ್ಯಾಗೇ-ದಾತೃತ್ವದಲ್ಲಿ, ಧನದೇನ-ಕುಬೇರನೊಂದಿಗೆ ಸಮಃ-ಸಮಾನನಾಗಿಯೂ, ಸತ್ಯೇ-ಸತ್ಯದಲ್ಲಿ, ಅಪರಃ-ಬೇರೆ ಅಲ್ಲದೆಇರುವ, ಧರ್ಮಃ-ಧರ್ಮದೇವತೆಯೋಪಾದಿ, ಇವಸ್ಥಿತಃ-ಇರುವಂಥಾವನಾಗಿಇದಾನೆ. ಏವಂ-ಈಮೇರೆ, ಗುಣಸಂಪನ್ನಂ, ಗುಣ-ಸದ್ಗುಣಗಳೊಂದಿಗೆ, ಸಂಪನ್ನಂ-ಕೂಡಿಇರುವ, ತಂ-ಹೀಗೆಹೇಳಲ್ಪಟ್ಟ, ಸತ್ಯಪರಾಕ್ರಮಂ-ಸತ್ಯವಾದ ಪರಾ

ಕ್ರಮವುಳ್ಳ, ರಾಮಂ-ಶ್ರೀರಾಮನೆಂದು ಹೆಸರುಳ್ಳ ॥

ಜ್ಯೇಷ್ಠಂಶ್ರೇಷ್ಠಗುಣೈರ್ಯುಕ್ತಂ ಪ್ರಿಯಂ ದಶರಥಸ್ಸುತಂ ।
ಪ್ರಕೃತೀನಾಂಹಿತ್ಯೈರ್ಯುಕ್ತಂ ಪ್ರಕೃತಿಪ್ರಿಯಕಾಮ್ಯಯಾ ॥೨೦॥
ಯೌವರಾಜ್ಯೇನಸಂಯೋಕ್ತು ಮೈಚ್ಛತ್ಪ್ರೀತ್ಯಾಮಹೀಪತಿಃ ।

ಟೀ॥ ಶ್ರೇಷ್ಠಗುಣೈಃ-ಉತ್ತಮಗಳಾದ ಗುಣಗಳೊಂದಿಗೆ, ಯುಕ್ತಂ-ಕೂಡಿಇರುವಂಥಾ, ಪ್ರಕೃತೀನಾಂ-ಪ್ರಜೆಗಳ, ಹಿತ್ಯೈಃ-ಪ್ರೇಮಗಳೊಡನೆ, ಯುಕ್ತಂ-ಕೂಡಿಇರುವಂಥಾ, ಪ್ರಿಯಂ-ತನ್ನಪ್ರೇಮಪಾತ್ರನಾದ, ಜ್ಯೇಷ್ಠಂ-ಹಿರಿಯನಾದ, ಸುತಂ-ಮಗನನ್ನು, ದಶರಥಃ-ತಂದೆಯಾದ ದಶರಥರಾಜನೆಂಬ, ಮಹೀಪತಿಃ-ಅರಸನು, ಪ್ರಕೃತಿಪ್ರಿಯಕಾಮ್ಯಯಾ,ಪ್ರಕೃತಿ-ಪ್ರಜೆಗಳಿಗೆ ಪ್ರಿಯಕಾಮ್ಯಯಾ-ಇಷ್ಟವನ್ನು ಮಾಡಬೇಕೆಂಬ ಇಚ್ಛೆಯಿಂದ,ಪ್ರೀತ್ಯಾ-ಪ್ರೀತಿಯಿಂದ, ಯೌವರಾಜ್ಯೇನ - ಯುವರಾಜನಾಗಿ ಇರುವಣದರೊಂದಿಗೆ, ಸಂಯೋಕ್ತುಂ-ಕೂಡಿಸುವದಕ್ಕೋಸ್ಕರ, ಐಚ್ಛತ್ - ಅಪೇಕ್ಷಿಸಿದನು ॥

ತಸ್ಯಾಭಿಷೇಕ ಸಂಭಾರಾ೯ ದೃಷ್ಟ್ವಾಭಾರ್ಯಾಥಕೈಕಯೀ ॥೨೧॥
ಪೂರ್ವಂದತ್ತವರಾದೇವೀವರಮೇನಮಯಾಚತ ।
ವಿವಾಸನಂಚ ರಾಮಸ್ಯ ಭರತಸ್ಯಾಭಿಷೇಚನಂ ॥ ॥೨೨॥

ಟೀ॥ ಅಥ-ತರುವಾಯ, ಕೈಕಯೀ-ಕೇಕಯ ರಾಯನ ಮಗಳಾದ, ತಸ್ಯ-ಆ ದಶರಥರಾಯನ, ಭಾರ್ಯಾ-ಹೆಂಡತಿಯು ಅಭಿಷೇಕಸಂಭಾರಾ೯,ಅಭಿಷೇಕ-ಪಟ್ಟಾಭಿಷೇಕದ, ಸಂಭಾರಾ೯-ಸಂವಿಧಾನಗಳನ್ನು, ದೃಷ್ಟ್ವಾ-ನೋಡಿ, ಪೂರ್ವಂ-ಪೂರ್ವಕಾಲದಲ್ಲಿ, ದತ್ತವರಾ-ದಶರಥನಿಂದ ಕೊಡಲ್ಪಟ್ಟವರವುಳ್ಳಂಥಾ, ದೇವೀ-ರಾಜಮಹಿಷಿಯು - ರಾಮಸ್ಯ-ರಾಮನಿಗೆ

ವಿವಾಸನಂ-ಅರಣ್ಯವಾಸವು, ಭರತಸ್ಯ-ಭರತನಿಗೆ , ಅಭಿಷೇಚನಂ-ಪಟ್ಟಾಭಿಷೇಕವು ಎಂಬದಾಗಿ, ಏನಂ-ಇಂಥಾ, ವರಂ-ವರಗಳನ್ನು, ಅಯಾಚತ-ಕೇಳಿದಳು ॥

ಸ ಸತ್ಯವಚನಾದ್ರಾಜಾ ಧರ್ಮಪಾಶೇನ ಸಂಯತಃ ।
ವಿವಾಸಯಾಮಾಸ ಸುತಂ ರಾಮಂ ದಶರಥಃ ಪ್ರಿಯಂ ॥ ॥೨೩॥

ಟೀ॥ ಸಃ-ಅಂಥಾ, ರಾಜಾ-ಅರಸನಾದ, ದಶರಥಃ-ದಶರಥನು,ಸತ್ಯವಚನಾತ್-ಸತ್ಯವಾಕ್ಯವಡೆಸೆಯಿಂದಲೂ,ಧರ್ಮಪಾಶೇನ--ಧರ್ಮವೆಂಬಪಾಶದಿಂದಲೂ, ಯಂತ್ರಿತಃ-ಕಟ್ಟಲ್ಪಟ್ಟಂಥಾವನಾಗಿ, ಪ್ರಿಯಂ-ಇಷ್ಟನಾದ. ಸುತಂ-ಮಗನಾದ, ರಾಮಂ-ರಾಮನನ್ನು, ವಿವಾಸಯಾಮಾಸ-ಅರಣ್ಯಕ್ಕೆ ಕಳುಹಿಸಿದನು ॥

ಸಜಗಾಮವನಂವೀರಃ ಪ್ರತಿಜ್ಞಾಮನುಪಾಲಯನ್ ।
ಪಿತುರ್ವಚನನಿರ್ದೇಶಾತ್ಕೈಕೇಯ್ಯಾಃ ಪ್ರಿಯಕಾರಣಾತ್ ॥ ॥೨೪॥

ಟೀ॥ ವೀರಃ-ಪರಾಕ್ರಮವಂತನಾದ, ಸಃ-ಆರಾಮನು, ಕೈಕೇಯ್ಯಾಃ-ಕೈಕೇಯಿದೇವಿಯ, ಪ್ರಿಯಕಾರಣಾತ್-ಇಷ್ಟವನ್ನು ನಡಿಸುವದಕ್ಕೋಸ್ಕರವು, ಪಿತುಃ-ತಂದೆಯ, ವಚನನಿರ್ದೇಶಾತ್-ಆಜ್ಞಾರೂಪವಾದ ವಾಕ್ಯದಿಂದ, ಪ್ರತಿಜ್ಞಾಂ-ಪಿತೃವಾಕ್ಯಪರಿಪಾಲನದ ಪ್ರತಿಜ್ಞೆಯನ್ನು, ಪರಿಪಾಲಯನ್-ಪರಿಪಾಲನವನ್ನು ಮಾಡುವವನಾಗಿ, ವನಂ-ಅರಣ್ಯವನ್ನು ಕುರಿತು, ಜಗಾಮ-ಹೊರಟನು ॥

ತಂವ್ರಜಂತಂಪ್ರಿಯೋಭ್ರಾತಾ ಲಕ್ಷ್ಮಣೋನುಜಗಾಮಹ ।
ಸ್ನೇಹಾದ್ವಿನಯಸಂಪನ್ನಸ್ಸುಮಿತ್ರಾನಂದವರ್ಧನಃ ॥ ॥೨೫॥
ಭ್ರಾತರಂದಯಿತೋಭ್ರಾತು ಸ್ಸೌಭ್ರಾತ್ರಮನುದರ್ಶಯನ್ ।

ಟೀ॥ ಪ್ರಿಯಃ-ಅಣ್ಣನಲ್ಲಿ ಪ್ರೀತಿಯುಳ್ಳವನಾಗಿಯೂ, ಸುಮಿತ್ರಾನಂದವರ್ಧನಃ-ಸುಮಿತ್ರಾದೇವಿಗೆ ಪ್ರಿಯಪುತ್ರನಾಗಿಯೂ, ಭ್ರಾತ್ರುಃ-ಅಣ್ಣನಿಗೆ, ದಯಿತಃ-ಇಷ್ಟನಾದ, ಲಕ್ಷ್ಮಣಃ-ಲಕ್ಷ್ಮಣನೆಂಬ, ಭ್ರಾತಾ-ತಮ್ಮನು, ವ್ರಜಂತಂ-ಅರಣ್ಯಕ್ಕೆ ಹೋಗುವಂಥಾ, ತಂ-ಅಂಥಾ, ಭ್ರಾತರಂ-ಅಣ್ಣನಾದ ರಾಮನನ್ನು, ಸೌಭ್ರಾತ್ರಂ-ಅಣ್ಣತಮ್ಮಂದಿರ ಅನುಕೂಲತ್ವವನ್ನು, ಅನುದರ್ಶಯನ್-ತೋರಿಸುವಂಥಾವನಾಗಿಯೂ, ಸ್ನೇಹಾತ್-ಸ್ನೇಹದದೆಸೆಯಿಂದ, ವಿನಯಸಂಪನ್ನಃ-ವಿನಯದೊಂದಿಗೆ ಸೇರಿದವನಾಗಿಯೂ, ಅನುಜಗಾಮ-ಹಿಂದೆಯೇ ಹೋದನು ॥

ರಾಮಸ್ಯದಯಿತಾಭಾರ್ಯಾ ನಿತ್ಯಂಪ್ರಾಣಸಮಾಹಿತಾ ॥೨೬॥
ಜನಕಸ್ಯಕುಲೇಜಾತಾ ದೇವಮಾಯೇವನಿರ್ಮಿತಾ ।
ಸರ್ವಲಕ್ಷಣಸಂಪನ್ನಾ ನಾರೀಣಾಮುತ್ತಮಾವಧೂಃ ॥೨೭॥
ಸೀತಾಪ್ಯನುಗತಾ ರಾಮಂ ಶಶಿನಂ ರೋಹಿಣೀಯಥಾ ॥

ಟೀ॥ ರಾಮಸ್ಯ-ರಾಮದೇವರಿಗೆ, ದಯಿತಾ-ಇಷ್ಟಳಾಗಿಯು, ನಿತ್ಯಂ-ಯಾವಾಗ್ಯೂ, ಪ್ರಾಣಸಮಾ-ಪ್ರಾಣಗಳೊಂದಿಗೆ ಸಮಾನೆಯಾಗಿಯೂ,ಹಿತಾ-ಅನುಕೂಲೆಯಾಗಿಯೂ, ಜನಕಸ್ಯ-ಜನಕರಾಯನ, ಕುಲೆ-ವಂಶದಲ್ಲಿ, ಜಾತಾ-ಹುಟ್ಟಿದವಳಾಗಿಯೂ, ದೇವಮಾಯಾಇವ-ದೇವತೆಗಳ ಮಾಯೆಯೋಪಾದಿ, ನಿರ್ಮಿತಾ-ನಿರ್ಮಿಸಲ್ಪಟ್ಟವಳಾಗಿಯೂ, ಸರ್ವಲಕ್ಷಣಸ,ಪನ್ನಾ-ಸಮಸ್ತ ಸುಲಕ್ಷಣಗಳೊಂದಿಗೆ ಕೂಡಿದವಳಾಗಿಯೂ ನಾರೀಣಾಂ-ಸ್ತ್ರೀಯರಿಗೆ,ಉತ್ತಮಾ-ಶ್ರೇಷ್ಠೆಯಾದ,ವಧೂಃ-ಸ್ತ್ರೀಯಾಗಿಇರುವ, ಭಾರ್ಯಾ - ಪತ್ನಿಯಾದ, ಸೀತಾಅಪಿ,

ಸೀತಾದೇವಿಯು ಸಹ, ಯಥಾ-ಯಾವಮೇರೆ, ಶಶಿನಂ-ಚಂದ್ರನನ್ನು, ರೋಹಿಣೀ-ರೋಹಿಣೀದೇವಿಯು ಅನುಸರಿಸುತ್ತಾಳೊ, ತಥಾ-ಆಮೇರೆ, ರಾಮಂ-ರಾಮದೇವರನ್ನು, ಅನುಗತಾ-ಬೆನ್ನಟ್ಟಿಹೋದಳು ॥

ಪೌರೈರನುಗತೋ ದೂರಂ ಪಿತ್ರಾ ದಶರಥೇನ ಚ ॥೨೮॥
ಶೃಂಗಬೇರಪುರೇ ಸೂತಂ ಗಂಗಾಕೂಲೇ ವ್ಯಸರ್ಜಯತ್ ।
ಗುಹಮಾಸಾದ್ಯ ಧರ್ಮಾತ್ಮಾ ನಿಷಾದಾಧಿಪತಿಂ ಪ್ರಿಯಂ ॥೨೯॥
ಗುಹೇನ ಸಹಿತೋ ರಾಮೋ ಲಕ್ಷ್ಮಣೇನ ಚ ಸೀತಯಾ ।

ಟೀ॥ ಧರ್ಮಾತ್ಮಾ-ಧರ್ಮಸ್ವರೂಪನಾದ ರಾಮನು, ಪೌರೈಃ-ಪಟ್ಟಣದಜನಗಳಿಂದಲೂ, ಪಿತಾ-ತಂದೆಯಾದ, ದಶರಥೇನ ಚ-ದಶರಥರಾಯನಿಂದಲೂ ಕೂಡ, ದೂರಂ-ಬಹಳದೂರದವರಿಗೂ, ಅನುಗತಃ-ಅನುಸರಿಸಲ್ಪಟ್ಟವನಾಗಿ, ಶೃಂಗಿಬೇರಪುರೇ-ಶೃಂಗಿಬೇರಪುರಸ್ಥಾನದಲ್ಲಿ, ಗಂಗಾಕೂಲೇ-ಗಂಗೆಯದಡದಲ್ಲಿ, ಪ್ರಿಯಂ-ಇಷ್ಟನಾದ, ನಿಷಾದಾಧಿಪತಿಂ-ನಿಷಾದ-ಬೇಡರಿಗೆ, ಅಧಿಪತಿಂ-ಅಧಿಪತಿಯಾದ, ಗುಹಂ-ಗುಹನೆಂಬವನನ್ನು, ಆಸಾದ್ಯ-ಹೊಂದಿ, ಸೂತಂ-ಸಾರಥಿಯನ್ನು, ವ್ಯಸರ್ಜಯತ್-ಹಿಂದಕ್ಕೆ ಕಳುಹಿಸಿದನು ॥

ತೇವನೇನ ವನಂಗತ್ವಾ ನದೀಸ್ತೀರ್ತ್ವಾಬಹೂದಕಾಃ ॥೩೦॥
ಚಿತ್ರಕೂಟಮನುಪ್ರಾಪ್ಯ ಭರದ್ವಾಜಸ್ಯ ಶಾಸನಾತ್ ।
ರಮ್ಯಮಾವಸಥಂಕೃತ್ವಾ ರಮಮಾಣಾವನೇತ್ರಯಃ ॥೩೧॥
ದೇವಗಂಧರ್ವಸಂಕಾಶಾಸ್ತತ್ರತೇನ್ಯವಸನ್‌ಸುಖಂ ।

ಟೀ॥ ರಾಮಃ-ಶ್ರೀರಾಮನು, ಗುಹೇನ-ಗುಹನೊಂದಿಗೂ, ಲಕ್ಷ್ಮಣೇನ-ಲಕ್ಷ್ಮಣನೊಂದಿಗೂ, ಸೀತಯಾಚ-ಸೀತಾದೇ

ವಿಯೊಂದಿಗೂ ಸಹ, ಸಹಿತಃ-ಕೂಡಿದಂಥಾವನಾಗಿ, ತೇ-ಅವರೆಲ್ಲರೂ, ವನೇನ-ಅರಣ್ಯಮಾರ್ಗದಿಂದಲೆ, ವನಂ-ಮತ್ತೊಂದು ಅರಣ್ಯವನ್ನು, ಗತ್ವಾ-ಐದಿ, ಬಹೂದಕಾಃ-ಹೇರಳವಾದ ನೀರುಳ್ಳ, ನದೀಃ-ಹೊಳೆಗಳನ್ನು, ತೀರ್ತ್ವಾ-ದಾಟಿ, ಭರದ್ವಾಜಸ್ಯ-ಭರದ್ವಾಜಮಹಾಮುನಿಯ, ಶಾಸನಾತ್ - ಆಜ್ಞೆಯ ದೆಸೆಯಿಂದ, ಚಿತ್ರಕೂಟಂ-ಚಿತ್ರಕೂಟವೆಂಬ ಪರ್ವತವನ್ನು ಅನುಪ್ರಾಪ್ಯ-ಶೇರಿ, ರಮ್ಯಂ-ರಮಣೀಯವಾದ, ಆಸವಥಂ-ಪರ್ಣಶಾಲೆಯನ್ನು, ಕೃತ್ವಾ-ರಚಿಸಿ, ವನೇ-ಅರಣ್ಯದಲ್ಲಿ, ರಮಮಾಣಾಃ-ವಿಹರಿಸುತಲಿರುವ, ತ್ರಯಃ-ಮೂರುಜನವೂ, ದೇವಗಂಧರ್ವ ಸಂಕಾಶಾಃ-ದೇವತೆಗಳಿಗೂ ಗಂಧರ್ವರಿಗೂ ಸಮರಾಗಿರುವ, ತೇ-ಅವರು, ತತ್ರ-ಆಚಿತ್ರಕೂಟದಲ್ಲಿ, ಸುಖಂ-ಸುಖವಾಗಿ, ನ್ಯವಸನ್-ವಾಸವಂ ಮಾಡಿದರು ॥೪॥

ಚಿತ್ರಕೂಟಂ ಗತೇ ರಾಮೇ ಪುತ್ರಶೋಕಾತುರಸ್ತದಾ ।
ರಾಜಾ ದಶರಥಸ್ಸ್ವರ್ಗಂ ಜಗಾಮ ವಿಲಪನ್ ಸುತಂ ॥ ॥೩೦॥

ಟೀ ॥ ತದಾ-ಆಕಾಲದಲ್ಲಿ, ರಾಮೇ-ಶ್ರೀರಾಮನು, ಚಿತ್ರಕೂಟಂ- ಚಿತ್ರಕೂಟಪರ್ವತವನ್ನು, ಗತೇಸತಿ-ಹೋಗುವಲ್ಲೂ, ಪುತ್ರಶೋಕಾತುರಃ-ಪುತ್ರಶೋಕ-ಪುತ್ರಶೋಕದಿಂದ, ಆತುರಃ-ದುಃಖಿತನಾದ, ರಾಜಾ-ಅರಸನಾದ, ದಶರಥಃ-ದಶರಥನು, ಸುತಂ-ಮಗನನ್ನು ಕುರಿತು, ವಿಲಪನ್-ಅಳುತ್ತಾ, ಸ್ವರ್ಗಂ-ಸ್ವರ್ಗಲೋಕವನ್ನು, ಜಗಾಮ-ಐದಿದನು ॥

ಮೃತೇತು ತಸ್ಮಿನ್ ಭರತೋ ವಸಿಷ್ಠಪ್ರಮುಖ್ಯೈರ್ದ್ವಿಜೈಃ ॥
ನಿಯುಜ್ಯಮಾನೋ ರಾಜ್ಯಾಯ ನೈಚ್ಛದ್ರಾಜ್ಯಂ ಮಹಾಬಲಃ॥೩೩

ಟೀ ॥ ತಸ್ಮಿನ್-ಆದಶರಥರಾಯನು; ಮೃತೇ-ಸಾಯಲು,

ಮಹಾಬಲಃ-ಅಧಿಕವಾದ ಬಲವುಳ್ಳ, ಭರತಃ-ಭರತನು, ವಸಿಷ್ಠಪ್ರಮುಖೈಃ-ವಸಿಷ್ಠರುಮೊದಲಾದ, ದ್ವಿಜೈಃ-ಬ್ರಾಹ್ಮಣರಿಂದ, ರಾಜ್ಯಾಯ-ರಾಜ್ಯಭಾರಕ್ಕೋಸ್ಕರ, ನಿಯುಜ್ಯಮಾನಃ-ಪ್ರೇರೇಪಿಸಲ್ಪಟ್ಟವನಾಗಿ, ರಾಜ್ಯಂ-ರಾಜ್ಯವನ್ನು, ನೈಚ್ಛತ್-ಅಪೇಕ್ಷಿಸಲಿಲ್ಲ ॥

ಸಜಗಾಮವನಂವೀರೋ ರಾಮಪಾದ ಪ್ರಸಾದಕಃ ॥

ಟೀ ॥ ವೀರಃ-ವೀರ್ಯವಂತನಾದ, ಸಃ-ಆ ಭರತನು, ರಾಮಪಾದಪ್ರಸಾದಕಃ, ರಾಮ-ರಾಮದೇವರ, ಪಾದ-ಪಾದಗಳನ್ನು, ಪ್ರಸಾದಕಃ-ಬೇಡಿಕೊಳ್ಳುವವನಾಗಿ, ವನಂ-ವನವನ್ನು, ಜಗಾಮ-ಹೋದನು ॥

ಗತ್ವಾತು ಸಮಹಾತ್ಮಾನಂ ರಾಮಂ ಸತ್ಯಪರಾಕ್ರಮಂ॥
ಅಯಾಚದ್ಭ್ರಾತರಂ ರಾಮಮಾರ್ಯಭಾವಪುರಸ್ಕೃತಃ ॥೩೫॥
ತ್ವಮೇವರಾಜಾ ಧರ್ಮಜ್ಞ ಇತಿ ರಾಮಂ ವಚೋಽಬ್ರವೀತ್ ॥

ಟೀ॥ ಸಃ-ಆ ಭರತನು, ಆರ್ಯಭಾವಪುರಸ್ಕೃತಃ-ಜ್ಯೇಷ್ಠನೆಂಬ ಮರ್ಯಾದೆಯನ್ನು ಮುಂದಿಟ್ಟುಕೊಂಡು, ಗತ್ವಾ-ರಾಮನಬಳಿಗೆ ಹೋಗಿ, ಮಹಾತ್ಮಾನಂ-ಮಹಿಮೆಯುಳ್ಳ ಸ್ವರೂಪವುಳ್ಳವನಾದ, ಸತ್ಯಪರಾಕ್ರಮಂ-ಸತ್ಯವಾದ ಪರಾಕ್ರಮವುಳ್ಳ, ಭ್ರಾತರಂ-ಅಣ್ಣನಾದ, ರಾಮಂ-ರಾಮನನ್ನು, ಅಯಾಚತ್ - ಕೇಳಿಕೊಂಡನು, ಮತ್ತು ಹೇ ಧರ್ಮಜ್ಞ-ಎಲೈ ಧರ್ಮವಂ ತಿಳಿದವನೆ, ತ್ವಮೇವ-ನೀನೇ, ರಾಜಾ-ರಾಜನು, ಇತಿ-ಎಂಬದಾಗಿ, ರಾಮಂ-ರಾಮನನ್ನು ಕುರಿತು, ವಚಃ-ವಾಕ್ಯವನ್ನು ಅಬ್ರವೀತ್-ನುಡಿದನು.

ರಾಮೋಽಪಿ ಪರಮೋದಾರಸ್ಸುಮುಖಸ್ಸುಮಹಾಯಶಾಃ ॥೩೬॥

ನಚೈಚ್ಛತ್ಪಿತುರಾದೇಶಾ ದ್ರಾಜ್ಯಂ ರಾಮೋ ಮಹಾಬಲಃ ||

ಟೀ|| ಸುಮುಖಃ-ಪ್ರಸನ್ನಮುಖನಾಗಿಯೂ, ಸುಮಹಾ ಯಶಾಃ-ಅಧಿಕವಾದ ಸತ್ಕೀರ್ತಿಯುಳ್ಳವನಾಗಿಯೂ, ಮಹಾ ಬಲಃ-ಮಹಾ ಬಲಿಷ್ಠನಾಗಿಯೂ ಇರುವ, ರಾಮಃ - ಅಪಿ-ಶ್ರೀರಾಮನೂ, ಪಿತುಃ-ತಂದೆಯ, ಆದೇಶಾತ್-ಆಜ್ಞಾಪರಿಪಾಲನವಂ ಬಿಟ್ಟು, ರಾಜ್ಯಂ-ರಾಜ್ಯವನ್ನು, ನಚೈಚ್ಛತ್ ಚ-ಯಿಚ್ಛಯಿಸಲೇ ಇಲ್ಲ.

ಪಾದುಕೇಚಾಸ್ಯ ರಾಜ್ಯಾಯ ನ್ಯಾಸಂ ದತ್ವಾ ಪುನಃ ಪುನಃ ||೩೭||
ನಿವರ್ತಯಾಮಾಸತತೋ ಭರತಂಭರತಾಗ್ರಜಃ ||

ಟೀ|| ಭರತಾಗ್ರಜಃ - ಭರತನಿಗೆ ಅಣ್ಣನಾದ ರಾಮನು, ಅಸ್ಯ-ಈ ಭರತನಿಗೆ, ಪಾದುಕೇ-ತನ್ನ ಪಾದುಕೆಗಳನ್ನು, ರಾಜ್ಯಾಯ-ರಾಜ್ಯಭಾರಕ್ಕೋಸ್ಕರ, ನ್ಯಾಸಂ- ನಿಕ್ಷೇಪವಾಗಿ, ದತ್ವಾ-ಕೊಟ್ಟು, ತತಃ-ತರುವಾಯ, ಪುನಃಪುನಃ-ಬಾರಿಬಾರಿಗೂ, ಭರತಂ-ಭರತನನ್ನು, ನಿವರ್ತಯಾಮಾಸ-ಬಳ್ಳಿಯ ಮಾತಾಡಿ ಹಿಂದಿರಿಗಿಸಿದನು ||

ಸಕಾಮಮನವಾಪ್ಯೈವ ರಾಮಪಾದಾವುಪಸ್ಪೃಶನ್ ||
ನಂದಿಗ್ರಾಮೇ ಕರೋದ್ರಾಜ್ಯಂ ರಾಮಾಗಮನಕಾಂಕ್ಷಯಾ||

ಟೀ|| ಸಃ-ಆ ಭರತನು, ಕಾಮಂ-ಅಪೇಕ್ಷೆಯನ್ನು,ಅನವಾಪ್ಯೈವ-ಪಡೆಯದೆಯೇ, ರಾಮಪಾದಾ - ಶ್ರೀರಾಮದೇವರ ಪಾದಗಳನ್ನು, ಉಪಸ್ಪೃಶನ್ - ನಮಸ್ಕರಿಸುತಲಿರುವಂಥಾವನಾಗಿ, ರಾಮಾಗಮನಕಾಂಕ್ಷಯಾ-ಶ್ರೀ ರಾಮನ ಬರುವಿಕೆಯಲ್ಲಿ ಕೋರಿಕೆಯಿಂದ, ನಂದಿಗ್ರಾಮೆ - ನಂದಿಗ್ರಾಮದಲ್ಲಿ, ರಾಜ್ಯಂ-ರಾಜಕಾರ್ಯವನ್ನು, ಅಕರೋತ್-ನಡಿಸಿದನು ||

ಗತೇತು ಭರತೇ ಶ್ರೀಮಾನ್ ಸತ್ಯಸಂಧೋ ಜಿತೇಂದ್ರಿಯಃ ।
ರಾಮಸ್ತು ಪುನರಾಲಕ್ಷ್ಯ ನಾಗರಸ್ಯ ಜನಸ್ಯಚ ।
ತತ್ರಾಗಮನಮೇಕಾಗ್ರೋ ದಂಡಕಾನ್ ಪ್ರವಿವೇಶಹ ॥೪೦॥

ಟೀ॥ ಶ್ರೀಮಾನ್-ಕಾಂತಿಯುಳ್ಳವನಾಗಿಯೂ, ಸತ್ಯಸಂಧಃ ಸತ್ಯವಾದ ಪ್ರತಿಜ್ಞೆಯುಳ್ಳವನಾಗಿಯೂ,ಜಿತೇಂದ್ರಿಯಃ-ಇಂದ್ರಿಯಗಳನ್ನು ಜಯಿಸಿದವನಾಗಿಯೂ ಯಿರುವ, ರಾಮಃತು-ರಾಮನಾದರೋ, ಭರತೇ-ಭರತನು, ಗತೇತು-ಹೊರಟುಹೋದತರುವಾಯ, ತತ್ರ-ಆ ಚಿತ್ರಕೂಟದಲ್ಲಿ, ನಾಗರಸ್ಯ-ಪಟ್ಟಣದಲ್ಲಿ ವಾಸಮಾಡುವ, ಜನಸ್ಯ-ಜನಗಳ, ಆಗಮನಂ-ಬರುವಿಕೆಯನ್ನು, ಆಲಕ್ಷ್ಯ-ನೋಡಿ, ಏಕಾಗ್ರಃ ಸನ್-ನಿಶ್ಚಲಚಿತ್ತನಾಗಿ, ದಂಡಕಾನ್-ದಂಡಕಾರಣ್ಯವನ್ನು, ಪ್ರವಿವೇಶ-ಪ್ರವೇಶಿಸಿದನು ॥

ಪ್ರವಿಶ್ಯ ತು ಮಹಾರಣ್ಯಂ ರಾಮೋರಾಜೀವಲೋಚನಃ ।
ವಿರಾಧಂ ರಾಕ್ಷಸಂ ಹತ್ವಾ ಶರಭಂಗಂ ದದರ್ಶಹ ॥೪೧॥
ಸುತೀಕ್ಷ್ಣಂಚಾಪ್ಯಗಸ್ತ್ಯಂ ಚ ಅಗಸ್ತ್ಯಭ್ರಾತರಂ ತಥಾ ॥

ಟೀ ॥ ರಾಜೀವಲೋಚನಃ,ರಾಜೀವ-ಕಮಲದೋಪಾದಿ, ಲೋಚನಃ-ಕಣ್ಗಳುಳ್ಳ, ರಾಮಃ-ರಾಮನು, ಮಹಾರಣ್ಯಂ, ಮಹಾ-ದೊಡ್ಡದಾದ, ಅರಣ್ಯಂ-ದಂಡಕಾರಣ್ಯವನ್ನು, ಪ್ರವಿಶ್ಯ-ಹೊಕ್ಕು, ವಿರಾಧಂ-ವಿರಾಧನೆಂಬ, ರಾಕ್ಷಸಂ-ರಾಕ್ಷಸನನ್ನು, ಹತ್ವಾ-ಕೊಂದು, ಶರಭಂಗಂ-ಶರಭಂಗನೆಂಬ ಮುನಿಯನ್ನು, ಸುತೀಕ್ಷ್ಣಂಚ-ಸುತೀಕ್ಷ್ಣನೆಂಬ ಋಷಿಯನ್ನು,ಅಪಿಚ-ಮತ್ತು, ಅಗಸ್ತ್ಯಂಚ-ಅಗಸ್ತ್ಯಮಹಾಮುನಿಯನ್ನೂ, ತಥಾ-ಹಾಗೆ, ಅಗಸ್ತ್ಯಭ್ರಾತರಂ-ಅಗಸ್ತ್ಯನ ತಮ್ಮನಾದ

ಋಷಿಯನ್ನೂ, ದದರ್ಶಹ-ನೋಡಿದನಲ್ಲವೆ ॥

ಅಗಸ್ತ್ಯವಚನಾಚ್ಚೈವ। ಜಗ್ರಾಹೈಂದ್ರಂ ಶರಾಸನಂ॥
ಖಡ್ಗಂ ಚ ಪರಮ ಪ್ರೀತಸ್ತೂಣೀಚಾಕ್ಷಯಸಾಯಕಾ॥

ಟೀ ॥ ಅಗಸ್ತ್ಯವಚನಾತ್-ಅಗಸ್ತ್ಯನಮಾತಿನ ದೆಶೆಯಿಂದ, ಐಂದ್ರಂ-ಇಂದ್ರನ ಸಂಬಂಧವಾದ, ಶರಾಸನಂ-ಬಿಲ್ಲನ್ನೂ, ಖಡ್ಗಂಚ-ಕತ್ತಿಯನ್ನೂ, ಅಕ್ಷಯಸಾಯಕೌ-ಅಕ್ಷಯ-ಕ್ಷಯವಿಲ್ಲದ, ಸಾಯಕೌ-ಅಂಬುಗಳುಳ್ಳ, ತೂಣೀಚ-ಬತ್ತಳಿಕೆಗಳನ್ನೂ ಸಹ, ಪರಮ ಪ್ರೀತಃ-ಬಹಳ ಸಂತುಷ್ಟನಾಗಿ, ಜಗ್ರಾಹ-ಗ್ರಹಿಸಿದನು ॥

ವಸತಸ್ತಸ್ಯ ರಾಮಸ್ಯ ವನೇವನಚರೈಸ್ಸಹ ॥೪೩॥
ಋಷಯೋಭ್ಯಾಗಮರ್ ಸರ್ವೇ ವಧಾಯಾಸುರರಕ್ಷಸಾಂ ॥

ಟೀ ॥ ವನಚರೈಃ-ವಾನಪ್ರಸ್ಥರು ಮುಂತಾದ ಅರಣ್ಯವಾಸಿಗಳೊಂದಿಗೆ, ವನೆ-ಅರಣ್ಯದಲ್ಲಿ, ವಸತಃ-ವಾಸಮಾಡುತಲಿರುವ, ತಸ್ಯ-ಅಂಥಾ ಪ್ರಸಿದ್ಧನಾದ, ರಾಮಸ್ಯ-ಶ್ರೀರಾಮನ ಸನ್ನಿಧಿಗೆ, ಸರ್ವೇ-ಸಮಸ್ತರಾದ, ಋಷಯಃ-ಋಷಿಗಳು, ಅಸುರರಕ್ಷಸಾಂ- ಅಸುರರು, ರಾಕ್ಷಸರು ಇವರುಗಳ, ವಧಾಯ-ಸಂಹಾರಕ್ಕೋಸ್ಕರ, ಅಭ್ಯಾಗಮರ್-ಬಂದರು ॥

ಸ ತೇಷಾಂ ಪ್ರತಿಶುಶ್ರಾವ ರಾಕ್ಷಸಾನಾಂ ತಥಾ ವನೇ॥೪೪॥

ಟೀ ॥ ತಥಾ-ಹಾಗೆ, ಸಃ-ಆರಾಮನು, ವನೆ-ವನದಲ್ಲಿ, ರಾಕ್ಷಸಾನಾಂ_ರಾಕ್ಷಸರ ಸಂಬಂಧವಾದ ಉಪದ್ರವವನ್ನು ಕುರಿತು, ತೇಷಾಂ_ಋಷಿಗಳ ಪ್ರಾರ್ಥನೆಗಳನ್ನು,ಪ್ರತಿಶುಶ್ರಾವ-ಕೇಳಿ ಅಂಗೀಕರಿಸಿದನು ॥

ಪ್ರತಿಜ್ಞಾತಶ ರಾಮೇಣ ವಧಸ್ಸಂಯತಿರಕ್ಷಸಾಂ ।

ಋಷೀಣಾಮಗ್ನಿಕಲ್ಪಾನಾಂ ದಂಡಕಾರಣ್ಯವಾಸಿನಾಂ||೪೫||

ಟೀ || ಅಗ್ನಿಕಲ್ಪಾನಾಂ-ಅಗ್ನಿಹೋತ್ರಗಳಿಗೆ ಸಮಾನರಾಗಿಯೂ, ದಂಡಕಾರಣ್ಯವಾಸಿನಾಂ-ದಂಡಕಾರಣ್ಯದಲ್ಲಿ ವಾಸಮಾಡುವವರಾಗಿಯೂ ಇರುವ, ಋಷೀಣಾಂ-ಋಷಿಗಳ ಮುಂದೆ, ರಾಮೇಣ-ಶ್ರೀರಾಮನಿಂದ,ಸಂಯುತಿಂ-ಯುದ್ಧದಲ್ಲಿ ರಕ್ಷಸಾಂ-ರಾಕ್ಷಸರ, ವಧಃ-ಸಂಹಾರವು, ಪ್ರತಿಜ್ಞಾತಃ ಚ-ಪ್ರತಿಜ್ಞೆ ಮಾಡಲೂ ಪಟ್ಟಿತು ||

ತೇನ ತತ್ರೈವ ವಸತಾ ಜನಸ್ಥಾನನಿವಾಸಿನೀ |
ವಿರೂಪಿತಾ ಶೂರ್ಪಣಖಾ ರಾಕ್ಷಸೀ ಕಾಮರೂಪಿಣೀ||೪೬||

ಟೀ || ತತ್ರೈವ-ಆದಂಡಕಾರಣ್ಯದಲ್ಲೇ, ವಸತಾ-ವಾಸಮಾಡುತ್ತಿರುವ, ತೇನ-ಶ್ರೀರಾಮನಿಂದ, ಜನಸ್ಥಾನನಿವಾಸಿನೀ-ಜನಸ್ಥಾನದಲ್ಲಿ ಇರುವಂಥಾ, ಕಾಮರೂಪಿಣೀ-ಅಪೇಕ್ಷಿಸಿದ ರೂಪವನ್ನು ಧರಿಸುವ ಶಕ್ತಿಯುಳ್ಳಂಥಾ, ಶೂರ್ಪನಖೀ-ಶೂರ್ಪನಖಿಯೆಂಬ ಹೆಸರುಳ್ಳ,ರಾಕ್ಷಸೀ-ರಾಕ್ಷಸಿಯು,ವಿರೂಪಿತಾ-ವಿರೂಪವಾಗಿ ಮಾಡಲ್ಪಟ್ಟಳು ||

ತತಶ್ಶೂರ್ಪಣಖಾವಾಕ್ಯಾ ದುದ್ಯುಕ್ತಾ ನ್ಸರ್ವರಾಕ್ಷಸಾ ನ್ |
ಖರಂ ತ್ರಿಶಿರಸಂ ಚೈವ ದೂಷಣಂಚೈವ ರಾಕ್ಷಸಂ||೪೭||
ನಿಜಘಾನ ರಣೇ ರಾಮಸ್ತೇಷಾಂ ಚೈವಪದಾನುಗಾ ನ್||

ಟೀ|| ತತಃ-ತರುವಾಯ, ಶೂರ್ಪನಖಾವಾಕ್ಯಾತ್-ಶೂರ್ಪನಖಿಯ ವಚನದ ದೆಸೆಯಿಂದ, ಉದ್ಯುಕ್ತಾ ನ್-ಪ್ರಯತ್ನವಂತರಾಗಿ ಯಿರುವ, ಸರ್ವರಾಕ್ಷಸಾಂ-ಸಕಲ ರಾಕ್ಷಸರನ್ನೂ,ಖರಂ - ಖರನೆಂಬುವನನ್ನು,ತ್ರಿಶಿರಸಂ-ತ್ರಿಶಿರಸ್ಸೆಂಬವನನ್ನೂ, ದೂಷಣಂಚ ಏವ -ದೂಷಣನೆಂಬದಾಗಿಯೂ

ಹೆಸರುಳ್ಳ, ರಾಕ್ಷಸಂ-ರಾಕ್ಷಸನನ್ನು, ತೇಷಾಂ - ಅವರುಗಳ,ಪದಾನುಗಾ‌ನ್-ಬಂದಿಗೆ ಬರುವಂತಾವರನ್ನೂ ಸಹ,ರಣೇ-ಕಾಳಗದಲ್ಲಿ, ರಾಮಃ - ಶ್ರೀರಾಮನು, ನಿಜಘಾನ - ಕೊಂದನು. ||

ವನೇ ತಸ್ಮಿ‌ನ್ ನಿವಸತಾ ಜನಸ್ಥಾನ ನಿವಾಸಿನಾಂ ||೪೮||
ರಕ್ಷಸಾಂ ನಿಹತಾನ್ಯಾಸ‌ನ್ ಸಹಸ್ರಾಣಿ ಚತುರ್ದಶ ||

ಟೀ|| ತಸ್ಮಿ‌ನ್-ಅಂಥಾ, ವನೇ-ಅರಣ್ಯದಲ್ಲಿ, ನಿವಸತಾ-ವಾಸಮಾಡುತ್ತಿರುವಂಥಾ-ರಾಮನಿಂದ, ಜನಸ್ಥಾನನಿವಾಸಿನಾಂ-ಜನಸ್ಥಾನದಲ್ಲಿರುವಂಥಾ, ರಕ್ಷಸಾಂ-ರಾಕ್ಷಸರ, ಚತುರ್ದಶ ಸಹಸ್ರಾಣಿ-ಹದಿನಾಲ್ಕುಸಾವಿರವು, ನಿಹತಾನಿ-ಕೊಲ್ಲಲ್ಪಟ್ಟವುಗಳಾಗಿ, ಆಸ‌ನ್-ಆದವು. ||

ತತೋಜ್ಞಾತಿವಧಂ ಶ್ರುತ್ವಾ ರಾವಣಃ ಕ್ರೋಧಮೂರ್ಛಿತಃ||೪೯ ||
ಸಹಾಯಂ ವರಯಾಮಾಸ ಮಾರೀಚಂನಾಮ ರಾಕ್ಷಸಂ ||

ಟೀ|| ತತಃ-ತರುವಾಯ, ರಾವಣಃ-ರಾವಣನು,ಜ್ಞಾತಿವಧಂ, ಜ್ಞಾತಿ-ಜ್ಞಾತಿಗಳ, ವಧಂ-ನಾಶವನ್ನು, ಶ್ರುತ್ವಾ-ಕೇಳಿ,ಕ್ರೋಧಮೂರ್ಛಿತಃ-ಪರವಶನಾಗಿ, ಮಾರೀಚಂನಾಮ - ಮಾರೀಚನೆಂಬ ಹೆಸರುಳ್ಳ, ರಾಕ್ಷಸಂ-ರಾಕ್ಷಸನನ್ನು, ಸಹಾಯಂ-ಸಹಾಯಕನನ್ನಾಗಿ, ವರಯಾಮಾಸ-ಕೋರಿದನು ||

ವಾರ್ಯಮಾಣಸ್ಸುಬಹುಶೋ ಮಾರೀಚೇನ ಸರಾವಣಃ ||೫೦||
ನವಿರೋಧೋ ಬಲವತ ಕ್ಷಮೋ ರಾವಣ ತೇನತೇ ||

ಟೀ|| ಹೇರಾವಣ-ಎಲೈ ರಾವಣನೆ, ಬಲವತಾ-ಬಲವಂತನಾದ, ತೇನ-ರಾಮನೊಂದಿಗೆ, ವಿರೋಧಃ-ದ್ವೇಷವು,ತೇ-ನಿನಗೆ.ನಕ್ಷಮಃ-ಯೋಗ್ಯವಲ್ಲ,ಇತಿ-ಎಂಬದಾಗಿ, ಸ್ಸುಬಹುಶಃ-ಬ

ಹುವಿಧವಾಗಿ, ಮಾರೀಚೇನ-ಮಾರೀಚನಿಂದ, ಸಃ- ಅಂಥಾ ರಾವಣನು, ವಾರ್ಯಮಾಣಃ-ನಿಷೇಧಿಸಲ್ಪಟ್ಟವನಾದನು ॥

ಅನಾದೃತ್ಯತು ತದ್ವಾಕ್ಯಂ ರಾವಣಃ ಕಾಲಚೋದಿತಃ॥೫೧॥
ಜಗಾಮ ಸಹಮಾರೀಚಸ್ತಸ್ಯಾಶ್ರಮಪದಂ ತದಾ॥

ಟೀ॥ ರಾವಣಃ-ರಾವಣನು, ಕಾಲಚೋದಿತಃ-ಯಮನಿಂದ ಪ್ರೇರಿತನಾಗಿ (ಅಂದರೆ ವಿನಾಶಕಾಲ ಸಮೀಪಿಸಿದ್ದದ್ದರಿಂದ ಯೆಂದು ಭಾವವು) ತದ್ವಾಕ್ಯಂ-ಮಾರೀಚನ ವಾಕ್ಯವನ್ನು, ಅನಾದೃತ್ಯ-ಲಕ್ಷ್ಯವಿಡದೆ,ತದಾ-ಆ ಕಾಲದಲ್ಲಿ, ಸಹಮಾರೀಚಃ ಮಾರೀಚನೊಂದಿಗೆ ಸೇರಿದವನಾಗಿ, ತಸ್ಯ-ಆ ರಾಮನ, ಆಶ್ರಮಪದಂ-ಆಶ್ರಮದ ಸ್ಥಾನವನ್ನು,ಜಗಾಮ-ಹೋದನು. ॥

ತೇನ ಮಾಯಾವಿನಾ ದೂರಮಪವಾಹ್ಯ ನೃಪಾತ್ಮಜೌ॥೫೨॥
ಜಹಾರ ಭಾರ್ಯಾಂ ರಾಮಸ್ಯ ಗೃಧ್ರಂ ಹತ್ವಾ ಜಟಾಯುಷಂ॥

ಟೀ॥ ಮಾಯಾವಿನಾ-ಮಾಯೆಗಳನ್ನು ತೋರಿಸುವಂಥಾ, ತೇನ-ಆ ಮಾರೀಚನಿಂದ, ನೃಪಾತ್ಮಜೌ - ರಾಜಪುತ್ರರಾದ ರಾಮಲಕ್ಷ್ಮಣರನ್ನು, ದೂರಂ-ಆಶ್ರಮದಿಂದ ಬಹುದೂರವನ್ನು, ಅಪವಾಹ್ಯ-ಹೋಗುವಂತೆ ಮಾಡಿಸಿ, ಜಟಾಯುಷಂ- ಜಟಾಯುವೆಂಬ, ಗೃಧ್ರಂ-ಹದ್ದನ್ನು, ಹತ್ವಾ-ಕೊಂದು, ರಾಮಸ್ಯ-ರಾಮನ, ಭಾರ್ಯಾಂ-ಪತ್ನಿಯನ್ನು, ಜಹಾರ-ಅಪಹರಿಸಿದನು. ॥

ಗೃಧ್ರಂಚ ನಿಹತಂ ದೃಷ್ಟ್ವಾ ಹೃತಾಂ ಶ್ರುತ್ವಾ ಚ ಮೈಥಿಲೀಂ।
ರಾಘವಶ್ಶೋಕಸಂತಪ್ತೋ ವಿಲಲಾಪಾಕುಲೇಂದ್ರಿಯಃ ॥

ಟೀ ॥ ರಾಘವಃ-ರಾಮನು, ನಿಹತಂ- ಹೊಡೆಯಲ್ಪಟ್ಟರುವ,ಗೃಧ್ರಂ-ಜಟಾಯುವನ್ನು, ದೃಷ್ಟ್ವಾ-ನೋಡಿ,ಮೈಥಿಲೀಂ-

ಚ-ಕೇಳಿಯೂ, ಶೋಕಸಂತಪ್ತಃ,ಶೋಕ-ದುಃಖದಿಂದ, ಸಂತಪ್ತಃ- ತಪಿಸಲ್ಪಟ್ಟವನಾಗಿಯೂ, ಆಕುಲೇಂದ್ರಿಯಃ-ವ್ಯಾಕುಲಹೃದಯನಾಗಿಯೂ, ವಿಲಲಾಪ-ಪ್ರಲಾಪಿಸಿದನು ॥

ತತಸ್ತೇನೈವ ಶೋಕೇನ ಗೃಧ್ರಂ ದಗ್ಧ್ವಾ ಜಟಾಯುಷಂ॥೭೪॥
ಮಾರ್ಗಮಾಣೋ ವನೇ ಸೀತಾಂ ರಾಕ್ಷಸಂ ಸಂದದರ್ಶಹ ।
ಕಬಂಧಂನಾಮ ರೂಪೇಣ ವಿಕೃತಂ ಘೋರದರ್ಶನಂ ॥

ಟೀ ॥ ತತಃ-ತರುವಾಯು, ತೇನೈವಶೋಕೇನ-ಅಂಥಾದುಃಖದಿಂದಲೇ, ಗೃಧ್ರಂ-ಜಟಾಯುವನ್ನು,ದಗ್ಧ್ವಾ-ಅಗ್ನಿಸಂಸ್ಕಾರಮಾಡಿ, ವನೇ-ಅರಣ್ಯದಲ್ಲಿ, ಸೀತಾಂ-ಸೀತೆಯನ್ನು, ಮಾರ್ಗಮಾಣಃ-ಹುಡುಕುವಂಥಾವನಾಗಿ, ರೂಪೇಣ-ಆಕಾರದಿಂದ, ವಿಕೃತಂ- ವಿಕಾರವುಳ್ಳವನಾಗಿಯೂ, ಘೋರದರ್ಶನಂ- ಭಯಂಕರವಾದ ನೋಟವುಳ್ಳವನಾಗಿಯೂ, ಕಬಂಧಂನಾಮ-ಕಬಂಧನೆಂಬ ಹೆಸರುಳ್ಳ, ರಾಕ್ಷಸಂ-ರಾಕ್ಷಸನನ್ನು, ದದರ್ಶ-ನೋಡಿದನು ॥

ತನ್ನಿಹತ್ಯ ಮಹಾಬಾಹು ರ್ದದಾಹ ಸ್ವರ್ಗತಶ್ಚ ಸಃ ।
ಸ ಚಾಸ್ಯ ಕಥಯಾಮಾಸ ಶಬರೀಂ ಧರ್ಮಚಾರಿಣೀಂ ॥೭೬॥
ಶ್ರಮಣೀಂ ಧರ್ಮನಿಪುಣಾ ಮಭಿಗಚ್ಛೇತಿ ರಾಘವ॥

ಟೀ ॥ ಮಹಾಬಾಹುಃ-ಬಲಿಷ್ಠಗಳಾದ ಭುಜಗಳುಳ್ಳ, ಸಃ-ಆರಾಮನು, ತಂ-ಆ ಕಬಂಧನನ್ನು, ನಿಹತ್ಯ-ಸಂಹರಿಸಿ, ದದಾಹ- ಸುಟ್ಟನು, ಸಃಚ-ಆಕಬಂಧನಾದರೊ, ಹೇ ರಾಘವ-ಎಲೈರಾಮನೆ, ಧರ್ಮನಿಪುಣಾಂ-ಧರ್ಮದಲ್ಲಿ ನಿಪುಣೆಯಾದ, ಶ್ರಮಣೀಂ-ಶ್ರಮಣಿಯೆಂಬುವಳನ್ನು ಕುರಿತು, ಅಭಿಗಚ್ಛ-ಹೋಗು, ಇತಿ-ಎಂಬದಾಗಿ, ಸಃಚ-ಆಕಬಂಧನೂ, ಅಸ್ಯ-

ಈ ರಾಮನಿಗೆ, ಧರ್ಮಚಾರಿಣೀಂ-ಧರ್ಮನಿರತೆಯಾದ, ಶಬರೀಂ-ಶಬರಿಯನ್ನು, ಕಥಯಾಮಾಸ-ಹೇಳಿದನು ॥

ಸೋಽಭ್ಯಗಚ್ಛನ್ಮಹಾತೇಜಾ ಶ್ಶಬರೀಂ ಶತ್ರುಸೂದನಃ॥೫೩॥

ಟೀ॥ ಮಹಾತೇಜಾಃ- ಮಹತ್ತಾದ ತೇಜಸ್ಸುಳ್ಳವನಾಗಿಯೂ, ಶತ್ರುಸೂದನಃ-ಶತ್ರುನಾಶಕನಾಗಿಯೂ ಇರುವ, ಸಃ-ರಾಮನು, ಶಬರೀಂ-ಶಬರಿಯನ್ನು ಕುರಿತು, ಅಭ್ಯಗಚ್ಛತ್-ಹೋದನು ॥

ಶಬರ್ಯಾ ಪೂಜಿತ ಸ್ಸಮ್ಯ ಗ್ರಾಮೋ ದಶರಥಾತ್ಮಜಃ ।
ಪಂಪಾತೀರೇ ಹನುಮತಾ ಸಂಗತೋ ವಾನರೇಣಹ ॥೫೪॥

ಟೀ॥ ದಶರಥಾತ್ಮಜಃ-ದಶರಥಕುಮಾರನಾದ ರಾಮನು, ಶಬರ್ಯಾ-ಶಬರಿಯಿಂದ, ಸಮ್ಯಕ್-ಚನ್ನಾಗಿ, ಪೂಜಿತಃ-ಪೂಜಿಸಲ್ಪಟ್ಟವನಾಗಿ, ಪಂಪಾತೀರೆ - ಪಂಪಾನದಿಯ ದಡದಲ್ಲಿ, ವಾನರೇಣ-ಕಪಿಯಾದ, ಹನುಮತಾ- ಹನುಮಂತನೊಂದಿಗೆ ಸಂಗತಃ-ಶೇರಿದನು ॥

ಹನುಮದ್ವಚನಾಚ್ಚೈವ ಸುಗ್ರೀವೇಣ ಸಮಾಗತಃ ।
ಸುಗ್ರೀವಾಯ ಚ ತತ್ಸರ್ವಂ ಶಂಸದ್ರಾಮೋ ಮಹಾಬಲಃ ॥೫೫॥
ಆದಿತ ಸ್ತದ್ಯಥಾವೃತ್ತಂ ಸೀತಾಯಾಶ್ಚ ವಿಶೇಷತಃ ।

ಟೀ॥ ಮಹಾಬಲಃ-ಅತಿಬಲಿಷ್ಠನಾದ, ರಾಮಃ-ರಾಮನು, ಹನೂಮದ್ವಚನಾತ್ - ಹನುಮಂತನ ವಾಕ್ಯದದೆಸೆಯಿಂದ, ಸುಗ್ರೀವೇಣ-ಸುಗ್ರೀವನೊಂದಿಗೆ, ಸಮಾಗತಃ - ಕೂಡಿದವನಾಗಿ, ಆದಿತಂ-ಮೊದಲಿನಿಂದ, ತತ್-ನಡದಂಥಾ, ವೃತ್ತಂ-ತನ್ನ ವೃತ್ತಾಂತವನ್ನು, ಯಥಾ-ಇದ್ದಹಾಗೆ, ವಿಶೇಷತಃ-ವಿಶೇಷವಾಗಿ, ಸೀತಾಯಾಃ - ಸೀತಾದೇವಿಯ ವೃತ್ತಾಂತವನ್ನು,

ತತ್-ಅಂಥಾ, ಸರ್ವಂ-ಸರ್ವ ವೃತ್ತಾಂತವನ್ನು ಸಹ, ಸುಗ್ರೀವಾಯ-ಸುಗ್ರೀವನೊಂದಿಗೆ, ಶಂಸತ್-ಹೇಳಿದನು ॥

ಸುಗ್ರೀವಶ್ಚಾಪಿ ತತ್ಸರ್ವಂ ಶ್ರುತ್ವಾ ರಾಮಸ್ಯ ವಾನರಃ ॥೬೦॥
ಚಕಾರ ಸಖ್ಯಂ ರಾಮೇಣ ಪ್ರೀತಶ್ಚೈವಾಗ್ನಿಸಾಕ್ಷಿಕಂ ॥

ಟೀ॥ ವಾನರಃ-ಕಪಿಯಾದ, ಸುಗ್ರೀವಃ ಚ ಅಪಿ - ಸುಗ್ರೀವನೂ ಕೂಡ, ರಾಮಸ್ಯ - ಶ್ರೀರಾಮನ, ತತ್ ಸರ್ವಂ-ಆವೃತ್ತಾಂತವನ್ನೆಲ್ಲಾ, ಶ್ರುತ್ವಾ-ಕೇಳಿ, ಪ್ರೀತಃ-ಸಂತುಷ್ಟನಾಗಿ ರಾಮೇಣ-ರಾಮನೊಂದಿಗೆ, ಅಗ್ನಿಸಾಕ್ಷಿಕಂ - ಅಗ್ನಿಸಾಕ್ಷಿಯಾದ, ಸಖ್ಯಂ-ಸ್ನೇಹವನ್ನು, ಚಕಾರ-ಮಾಡಿಕೊಂಡನು ॥

ತತೋ ವಾನರರಾಜೇನ ವೈರಾನುಕಥನಂ ಪ್ರತಿ ॥ ೬೧ ॥
ರಾಮಾಯಾವೇದಿತಂ ಸರ್ವಂ ಪ್ರಣಯಾದ್ದುಃಖಿತೇನಚ ॥

ಟೀ॥ ತತಃ-ಸ್ನೇಹವಾದತರುವಾಯ, ವೈರಾನುಕಥನಂ ಪ್ರತಿ, ವೈರ-ಅಣ್ಣನೊಂದಿಗೆ ತನಗುಂಟಾದ ವೈರದ, ಅನುಕಥನಂಪ್ರತಿ-ಪುನಃ ಹೇಳಿಕೆಯನ್ನು ಕುರಿತು, ದುಃಖಿತೇನ-ದುಃಖಿಸಿಯಿರುವ, ವಾನರರಾಜೇನ-ವಾನರರಿಗೆ ಅರಸನಾದ ಸುಗ್ರೀವನಿಂದ, ಪ್ರಣಯಾತ್-ಸ್ನೇಹದ ದೆಸೆಯಿಂದ, ಸರ್ವಂ-ತನ್ನವೃತ್ತಾಂತವೆಲ್ಲಾ, ರಾಮಾಯ-ಶ್ರೀ ರಾಮನಿಗೆ, ಆವೇದಿತಂ-ತಿಳಿಸಲ್ಪಟ್ಟಿತು ॥

ಪ್ರತಿಜ್ಞಾತಂ ಚ ರಾಮೇಣ ತದಾ ವಾಲಿವಧಂಪ್ರತಿ ॥೬೨॥
ವಾಲಿನಶ್ಚ ಬಲಂ ತತ್ರ ಕಥಯಾಮಾಸ ವಾನರಃ ।

ಟೀ॥ ತದಾ-ಆಕಾಲದಲ್ಲಿ, ರಾಮೇಣ-ರಾಮನಿಂದ, ವಾಲಿವಧಂಪ್ರತಿ-ವಾಲಿಯ ಸಂಹಾರವನ್ನು ಕುರಿತು, ಪ್ರತಿಜ್ಞಾತಂ

ಚ-ಪ್ರತಿಜ್ಞೆಯೂ ಮಾಡಲ್ಪಟ್ಟಿತು. ತತ್ರ-ಆ ಪ್ರಕರಣದಲ್ಲಿ, ವಾಲಿನಃ-ವಾಲಿಯು, ಬಲಂಚ-ಬಲವನ್ನು ಸಹ, ವಾನರಃ-ಸುಗ್ರೀವನು, ಕಥಯಾಮಾಸ-ಹೇಳಿದನು ॥

ಸುಗ್ರೀವ ಶ್ಶಂಕಿತಶ್ಚಾಸೀನ್ನಿತ್ಯಂ ವೀರ್ಯೇಣ ರಾಘವೇ ॥೬೩॥

ಟೀ॥ ಸುಗ್ರೀವಃ-ಸುಗ್ರೀವನು, ರಾಘವೇ-ಶ್ರೀರಾಮನಲ್ಲಿ, ವೀರ್ಯೇಣ-ಪರಾಕ್ರಮ ವಿಷಯದಿಂದ, ಶಂಕಿತಃಚ - ಈತನಿಗೆ ವಾಲಿಸಂಹಾರದಲ್ಲಿ ಸಾಮರ್ಥ್ಯವುಂಟೋ ಇಲ್ಲವೊ ಎಂಬ ಶಂಕೆಯುಳ್ಳವನಾಗಿಯೂ, ಆಸೀತ್-ಆದನು ॥

ರಾಘವಪ್ರತ್ಯಯಾರ್ಥಂತು ದುಂದುಭೇಃ ಕಾಯಮುತ್ತಮಂ ॥
ದರ್ಶಯಾಮಾಸ ಸುಗ್ರೀವೋ ಮಹಾಪರ್ವತಸನ್ನಿಭಂ ॥

ಟೀ॥ ಸುಗ್ರೀವಃ-ಸುಗ್ರೀವನು, ರಾಘವಪ್ರತ್ಯಯಾರ್ಥಂ, ರಾಘವ-ರಾಮನ, ಪ್ರತ್ಯಯಾರ್ಥಂ-ಪರಾಕ್ರಮದ ನಂಬಿಕೆಗೋಸ್ಕರ,ಮಹಾಪರ್ವತಸನ್ನಿಭಂ-ದೊಡ್ಡಬೆಟ್ಟಕ್ಕೆ ಸರಿಯಾದ, ಉತ್ತಮಂ-ಅತಿಭಾರವುಳ್ಳ, ದುಂದುಭೇಃ-ದುಂದುಭಿಯೆಂಬರಾಕ್ಷಸನ, ಕಾಯಂ-ದೇಹವನ್ನು, ದರ್ಶಯಾಮಾಸ-ರಾಮನಿಗೆ ತೋರಿಸಿದನು ॥

ಉತ್ಸ್ಮಯಿತ್ವಾ ಮಹಾಬಾಹುಃ ಪ್ರೇಕ್ಷ್ಯಚಾಸ್ಥಿ ಮಹಾಬಲಃ ।
ಪಾದಾಂಗುಷ್ಠೇನ ಚಿಕ್ಷೇಪ ಸಂಪೂರ್ಣಂ ದಶಯೋಜನಂ ॥೬೫॥

ಟೀ॥ ಮಹಾಬಾಹುಃ-ಮಹತ್ತಾದ ಭುಜಗಳುಳ್ಳವನಾಗಿಯೂ, ಮಹಾಬಲಃ-ಅಧಿಕಬಲವುಳ್ಳವನೂ ಆದ ರಾಮನು, ಉತ್ಸ್ಮಯಿತ್ವಾ-ತನ್ನಶಕ್ತಿಯನ್ನು ತಿಳಿಯದೆ ಸುಗ್ರೀವನು ತನ್ನಂ ಪರೀಕ್ಷಿಸುತ್ತಾನೆಂದು ಮುಗುಳುನಗೆಗೊಂಡು, ಅಸ್ಥಿ-

ಆದುಂದುಭಿದೇಹದ ಮೂಳೆಯನ್ನು, ಪ್ರೇಕ್ಷ್ಯ-ನೋಡಿ, ಸಂಪೂರ್ಣಂ-ಸಂಪೂರ್ಣವಾಗಿ, ದಶಯೋಜನಂ-ಹತ್ತುಯೋಜನದೂರ ಬೀಳುವಂತೆ, ಪಾದಾಂಗುಷ್ಠೇನ-ಕಾಲಿನ ಹೆಬ್ಬೆಟ್ಟಿನಿಂದ, ಚಿಕ್ಷೇಪ-ಹಾರಿಸಿದನು ॥

ಬಿಭೇದ ಚ ಪುನಸ್ಸಾಲಾನ್ ಸಪ್ತೈಕೇನ ಮಹೇಷುಣಾ ।
ಗಿರಿಂ ರಸಾತಲಂ ಚೈವ ಜನಯನ್ ಪ್ರತ್ಯಯಂ ತದಾ ॥೬೬॥

ಟೀ॥ ಪುನಃ-ಮತ್ತು, ತದಾ-ಆವಾಗ, ಪ್ರತ್ಯಯಂ-ಸುಗ್ರೀವನಿಗೆ ನಂಬಿಕೆಯನ್ನು, ಜನಯನ್-ಹುಟ್ಟಿಸುವಂಥಾವನಾಗಿ, ಏಕೇನ-ಒಂದೆಯಾದ, ಮಹೇಷುಣಾ-ಮಹತ್ತಾದ ಬಾಣದಿಂದ, ಸಪ್ತಸಾಲಾನ್-ಏಳು ತೆಂಗಿನಮರಗಳನ್ನೂ, ಗಿರಿಂ-ಅವುಗಳ ಬಳಿಯಣ ಬೆಟ್ಟವನ್ನೂ, ರಸಾತಲಂಚ-ಪಾತಾಳವನ್ನು ಸಹ, ಬಿಭೇದಚ-ಭೇದಿಸಿದನು ॥

ತತಃ ಪ್ರೀತಮನಾ ಸ್ತೇನ ವಿಶ್ವಸ್ತ ಸ್ಸಮಹಾಕಪಿಃ ।
ಕಿಷ್ಕಿಂಧಾಂ ರಾಮಸಹಿತೋ ಜಗಾಮ ಚ ಗುಹಾಂ ತದಾ ॥೬೭॥

ಟೀ॥ ತತಃ-ತರುವಾಯ, ತೇನ-ಅಂಥಾ ರಾಮನಕೆಲಸದಿಂದ, ವಿಶ್ವಸ್ತಃ-ನಂಬಿಕೆಯುಳ್ಳವನಾಗಿಯೂ, ಪ್ರೀತಮನಾಃ-ಸಂತುಷ್ಟಹೃದಯನಾಗಿಯೂ ಇರುವ, ಸಃ-ಅಂಥಾ, ಮಹಾಕಪಿಃ-ಕಪಿಶ್ರೇಷ್ಠನಾದ ಸುಗ್ರೀವನು, ರಾಮಸಹಿತಃ-ರಾಮನೊಂದಿಗೆ ಸೇರಿದವನಾಗಿ, ಗುಹಾಂ-ಗುಹಾರೂಪವಾದ, ಕಿಷ್ಕಿಂಧಾಂ-ಕಿಷ್ಕಿಂಧಾಪಟ್ಟಣವನ್ನು ಕುರಿತು, ಜಗಾಮ-ಹೋದನು ॥

ತತೋ ಗರ್ಜ ದ್ಧರಿವರ ಸ್ಸುಗ್ರೀವೋ ಹೇಮಪಿಂಗಳಃ ।
ತೇನ ನಾದೇನ ಮಹತಾ ನಿರ್ಜಗಾಮ ಹರೀಶ್ವರಃ॥೬೮॥

ಟೀ॥ ತತಃ-ತರುವಾಯ, ಹೇಮಪಿಂಗಳಃ,ಹೇಮ-ಚಿನ್ನ ದಂತೆ, ಪಿಂಗಳಃ-ಕೆಂಪುಕೂಡಿದ ಹಳದಿಬಣ್ಣವುಳ್ಳವನಾಗಿ ಯೂ, ಹರಿವರಃ-ಕಪಿಶ್ರೇಷ್ಠನಾಗಿಯೂ ಇರುವ, ಸುಗ್ರೀವಃ-ಸುಗ್ರೀವನು, ಅಗರ್ಜತ್-ಗರ್ಜನೆಮಾಡಿದನು. ಮಹತಾ-ಅಧಿಕವಾದ, ತೇನ-ಅಂಥಾ,ನಾದೇನ-ಧ್ವನಿಯಿಂದ, ಹರೀಶ್ವರಃ-ಕಪಿರಾಜನಾದ ವಾಲಿಯು,ನಿರ್ಜಗಾಮ-ಹೊರಟನು॥

ಅನುಮಾನ್ಯ ತದಾ ತಾರಾಂ ಸುಗ್ರೀವೇಣ ಸಮಾಗತಃ ।
ನಿಜಘಾನ ಚ ತತ್ರೈನಂ ಶರೇಣೈಕೇನ ರಾಘವಃ ॥೬೯॥

ಟೀ॥ ತದಾ-ಆವಾಗ, ತಾರಾಂ-ತಾರೆಯೆಂಬ ತನ್ನ ಹೆಂಡತಿಯನ್ನು, ಅನುಮಾನ್ಯ-ಸಮ್ಮತಿಪಡಿಸಿ, ಸುಗ್ರೀವೇಣ-ಸುಗ್ರೀವನೊಂದಿಗೆ, ಸಮಾಗತಃ-ಕಲತನು. ತತ್ರ-ಆ ಕಾಳಗದಲ್ಲಿ, ರಾಘವಃ-ರಾಮನು, ಏನಂ-ಈ ವಾಲಿಯನ್ನು, ಏಕೇನಶರೇಣ-ಒಂದು ಬಾಣದಿಂದ, ನಿಜಘಾನ-ಹೊಡೆದನು ॥

ತತ ಸ್ಸುಗ್ರೀವವಚನಾ ದ್ಧತ್ವಾ ವಾಲಿನಮಾಹವೇ ।
ಸುಗ್ರೀವಮೇವ ತದ್ರಾಜ್ಯೇ ರಾಘವಃ ಪ್ರತ್ಯಪಾದಯತ್ ॥೭೦॥

ಟೀ॥ ತತಃ-ತರುವಾಯ, ರಾಘವಃ-ರಾಮನು, ವಚನಾತ್-ಸುಗ್ರೀವನ ವಾಕ್ಯದದೆಸೆಯಿಂದ, ಆಹವೇ-ಕಾಳಗದಲ್ಲಿ, ವಾಲಿನಂ-ವಾಲಿಯನ್ನು, ಹತ್ವಾ-ಸಂಹರಿಸಿ, ತದ್ರಾಜ್ಯೇ-ಅವನರಾಜ್ಯದಲ್ಲಿ, ಸುಗ್ರೀವಮೇವ-ಸುಗ್ರೀವನನ್ನೇ, ಪ್ರತ್ಯಪಾದಯತ್-ನೆಲೆಗೊಳಿಸಿದನು ॥

ಸಚ ಸರ್ವಾ ಸಮಾನೀಯ ವಾನರಾ ವಾನರರ್ಷಭಃ ।
ದಿಶಃ ಪ್ರಸ್ಥಾಪಯಾಮಾಸ ದಿದೃಕ್ಷು ರ್ಜನಕಾತ್ಮಜಾಂ ॥೭೧॥

ಟೀ॥ ವಾನರರ್ಷಭಃ - ವಾನರಶ್ರೇಷ್ಠನಾದ, ಸಃಚ-ಆ